ಪಾ. ವೆಂ. ಆಚಾರ್ಯರ ಸಮಗ್ರ ಸಾಹಿತ್ಯ - ಸಂಪುಟ ೭

(ಪ್ರಧಾನ ಸಂಪಾದಕರು : ಡಾ. ಶ್ರೀನಿವಾಸ ಹಾವನೂರ )

# ಹಿಂದೂ - ಮುಸ್ಲಿಮ್

## ಮತ್ತು

# ಇತರ ಕತೆಗಳು

ಕತೆಗಾರರು

ಪಾ. ವೆಂ. ಆಚಾರ್ಯ

ಸುಮಂತ ಪ್ರಕಾಶನ

ಉಪ್ಪಿನಕೋಟೆ, ಬ್ರಹ್ಮಾವರ

HINDU - MUSLIM
MATTU
ETHARA KATHEGALU :
PA. VEM. ACHARYARYARA
SAMAGRA SAHITYA - SAMPUTA 7

---

Published by :
**Sumantha Prakashana,**
1-183, Uppinakote,
Brahmavar - 576 213.
Udupi Dist.

---

First Impression : 2002
Pages: XIV + 84

---

ಹಿಂದೂ - ಮುಸ್ಲಿಮ್ ಮತ್ತು ಇತರ ಕತೆಗಳು

ಬೆಲೆ : ರೂ. 42.00

---

ಪ್ರತಿಗಳಿಗೆ :
**ನವಭಾರತ ಪುಸ್ತಕ ಭಂಡಾರ**
ಪ್ರಧಾನ ಅಂಚೆ ಕಛೇರಿ ಬಳಿ
ಉಡುಪಿ - 576 101.
ದೂರವಾಣಿ ಸಂಖ್ಯೆ : 521082

---

Cover Design : Honna - Padma Printers, Udupi.
D.T.P at : Prasadhan Computers, Bejai, Mangalore.
Printed at : Honna - Padma Printers, Udupi.

# ನೆನವರಿಕೆಗಳು..

ಇಲ್ಲಿ ಸಂಗ್ರಹಿತವಾದ ಕತೆಗಳಲ್ಲಿ ಹೆಚ್ಚಿನವು ಹಳಗಾಲದವು, ಎಂದರೆ ೧೯೩೦ರ ದಶಕದವು. ಈ ಅಂಶವನ್ನು ಎತ್ತಿಹೇಳುವ ಕಾರಣವೆಂದರೆ, ರಚಿತವಾದ ಕಾಲ ಹಿಂದಿನದಾಗಿದ್ದರೂ ತಮ್ಮ ವಿಶಿಷ್ಟ ಸನ್ನಿವೇಶ ಹಾಗೂ ಅನಿರೀಕ್ಷಿತ ತಿರುವುಗಳಿಂದಾಗಿ ಹೊಸ ಕಾಲದ ಕಥನಕ್ರಮವನ್ನೂ ನಿವಾರಿಸುವಂತಿವೆ. ಶೀರ್ಷಿಕೆಯನ್ನು ಪಡೆದುಕೊಂಡಿರುವ ಹಿಂದೂ-ಮುಸ್ಲಿಂ ಕತೆಯನ್ನೇ ತೆಗೆದುಕೊಳ್ಳಿರಿ. ಇದೇನೋ ಹಿಂದೂ ಮುಸ್ಲಿಂ ಐಕ್ಯತೆಯನ್ನು ಹೇಳಹೊರಟಿರುವ ಕತೆಯೆಂದು ನಮಗೆ ಅನಿಸಬಹುದು. ಆದರೆ ಆ ಘರ್ಷಣೆಯ ದುರುಪಯೋಗದ ಬಗೆ ನವೀನವಾದದ್ದೇ ಅಲ್ಲವೆ

ಈ ದೃಷ್ಟಿಯಿಂದ 'ಅಪರ ಜೀವನ' ಕತೆಯನ್ನು ಗಮನಿಸಬೇಕು. ಈ ಕತೆಯು ೧೯೪೦ರಲ್ಲಿ 'ಅಂತರಂಗ ಕಥೆಗಳು' ಎಂಬ ಸಂಗ್ರಹದಲ್ಲಿ ಬಂದಿತ್ತು. ನಮಗೆ ಅದು ಸಿಕ್ಕದಾಗ ಪತ್ರಿಕಾ ಪ್ರಕಟನೆಯನ್ನು ಕೊಡಲಾಗಿತ್ತು. ಇನ್ನದರ ಆಸೆ ಬಿಟ್ಟಾಗ ಮಿತ್ರ ಶ್ರೀ ದೇಶಕುಲಕರ್ಣಿಯವರು ಆ ಕತೆಯನ್ನೂ, ಅದೇ ಸಂಕಲನದಲ್ಲಿ ಬಂದಿದ್ದ ಇನ್ನೆರಡು ಕತೆಗಳನ್ನು ಒದಗಿಸಿದರಲ್ಲದೆ, 'ಅಪರ ಜೀವನ'ದ ಕುರಿತು ಕೆಲವು ಹೆಚ್ಚಿನ ಅಂಶಗಳನ್ನೂ ತಿಳಿಸಿ, ಉಪಕರಿಸಿದ್ದಾರೆ. ಆ ವಿವರ ಹೀಗಿದೆ :

'ಆತ್ಮ' ಎನ್ನುವುದು ಅಮರವಾದದ್ದು. 'ವಾಸಾಂಸಿ ಜೀರ್ಣಾನಿ ಯಥಾ ವಿಹಾಯ' ಎಂಬ ಗೀತೋಕ್ತಿಯಂತೆ ಪರಕಾಯ ಪ್ರವೇಶ ಮಾಡಬಹುದು. ಅರ್ಥಾತ್ ಹಿಂದಿನ ಜನ್ಮದ್ದು ಇಂದಿಗೆ ಸಾಗಿಬರುತ್ತವಾದರೂ ಅದರ ನೆನಹು -ಕುರುಹು ಮಾತ್ರ ಇರುವುದಿಲ್ಲ. ಕೆಲವರಲ್ಲಿ ಅಪ್ಪಿತಪ್ಪಿ ಹೊರಹೊಮ್ಮಬಹುದು. ಅದಕ್ಕೆ ಉದಾಹರಣೆಗಳು ಆಗೊಮ್ಮೆ ಈಗೊಮ್ಮೆ ಕಂಡು ಬಂದಾವು.

ಪಾಶ್ಚಾತ್ಯ ಮನೋವಿಜ್ಞಾನವು ಇದನ್ನು para psychology ಎಂದು ಹೆಸರಿಸಿತು. ಸಾಹಿತ್ಯದಲ್ಲಿಯೂ ಅಪರೂಪಕ್ಕೆಂಬಂತೆ ಕಾಣಿಸಿಕೊಂಡದ್ದುಂಟು. ಭೈರಪ್ಪ ಅವರ 'ನಾಯಿನೆರಳು' ಕಾದಂಬರಿ ಇದೇ ಹಿನ್ನೆಲೆಯನ್ನು ಹೊಂದಿದೆ. ಈ ಅತೀಂದ್ರಿಯ

ಜ್ಞಾನದ ಅಂಶವನ್ನು ಮುಖ್ಯವಾಗಿಟ್ಟುಕೊಂಡು 'ಸೋನಾರ್ ಕಿಲಾ' ಎಂಬ ಚಲನಚಿತ್ರವನ್ನು ಸತ್ಯಜಿತ್ ರೇ ನಿರ್ಮಿಸಿದ್ದನ್ನೂ ಇಲ್ಲಿ ಸ್ಮರಿಸಬೇಕು. ಸುಮಾರು ಅದೇ ಕಾಲಕ್ಕೆ Illustrated weekly' ಪತ್ರಿಕೆಯಲ್ಲಿ ಇಂಥ ಅತೀಂದ್ರಿಯ ಜ್ಞಾನದ ಕೆಲವು ಘಟನೆಗಳು ಪ್ರಕಟವಾದದ್ದುಂಟು.

ಪಾವೆಂ. ಆಚಾರ್ಯರ ಈ 'ಅಪರಜೀವನ' ಕತೆಯು ಅದಕ್ಕೂ ಎಷ್ಟೋ ಹಿಂದಿನದು. ಇಂಗ್ಲಿಶ್‌ನಲ್ಲಿ ಈ ವಸ್ತುವಿನ ಕತೆಯೊಂದು ಪ್ರಕಟವಾಗಿತ್ತಂತೆ. ಆಚಾರ್ಯರು ಅದನ್ನು ಓದಿದ್ದರು. ಆದರೆ ಆ ಕತೆಗಾರ ಹಾಗೂ ಕತೆಯ ಹೆಸರನ್ನು ಮರೆತು ಬಿಟ್ಟಿದ್ದರಂತೆ. ಅದರ ಪ್ರೇರಣೆಯನ್ನಷ್ಟೆ ಬಳಸಿ, ನಮ್ಮ ಜೀವನ ಪರಿಸರಕ್ಕೆ ಸೂಕ್ತವಾದ ರೀತಿಯಲ್ಲಿ ಬರೆದರು. 'ಅಂತರಂಗ' ಪತ್ರಿಕೆಯಲ್ಲಿ ಪ್ರಕಟವೂ ಆಯಿತು. ಈ ಕತೆಯಲ್ಲಿ ಸೇಡು, ನಿಗೂಢತೆ, ಕೊನೆ, ಆತ್ಮಹತ್ಯೆ ಇವೆಲ್ಲ 'ಪರಕಾಯ ಪ್ರವೇಶ' ರೀತಿಯಲ್ಲಿ ಕೆಲಸ ಮಾಡುತ್ತವೆ. ಇಂದಿಗೂ ನವನವೀನವಾದ ಕಥಾರಚನೆ ಎನ್ನಬೇಕು. 'ಅತೀಂದ್ರಿಯ' ಪ್ರಜ್ಞೆಯ ಸಾಹಿತ್ಯವು ಇಂದಿಗೂ ಕಡಿಮೆ ಇರುವಾಗ ಪಾವೆಂ ಮೊದಲ ಬಾರಿಗೆ ಅದನ್ನು ಕನ್ನಡ ಸಾಹಿತ್ಯದಲ್ಲಿ ತಂದದ್ದು ಅವರ ಹಿರಿಮೆಯಾಗಿದೆ.

ಕತೆಗಳ ಬಗ್ಗೆ ನಾನೇನು ವಿವರವಾಗಿ ಹೇಳುವುದನ್ನಿಟ್ಟುಕೊಂಡಿಲ್ಲ. ಆ ಕೆಲಸ ಶ್ರೀ ಬನ್ನಂಜೆ ರಾಮಾಚಾರ್ಯರು ಮಾಡಿದ್ದಾರೆ. ವಿಶ್ವಸ್ಥ ಸಮಿತಿಯ ಪತಿಯಿಂದ ಮನಪಾರೆ ಅವರ ಉಪಕಾರವನ್ನು ಸ್ಮರಿಸುವೆ.

ನವಯುಗದ ಶ್ರೀಮತಿ ಶಾಂಭವಿ ಪಾವೆಂ ಅವರ ಬಗ್ಗೆ ವಿಶೇಷ ಆದರವನ್ನು ಹೊಂದಿದವರು. 'ನನಗೂ ಅವರದೊಂದು ಕೃತಿಯನ್ನು ಪ್ರಕಟಿಸಲು ಅವಕಾಶ ಕೊಡಿರಿ' ಎಂದು ಕೇಳುವಷ್ಟು ಗೌರವ ಭಾವನೆ ಪಾವೆಂ ಆಚಾರ್ಯರ ಬಗ್ಗೆ. ಅವರಿಗೆ ನಮ್ಮ ವಿಶೇಷ ನಮನಗಳು.

ಎಂದಿನಂತೆ ಪ್ರಸಾಧನ ಕಂಪ್ಯೂಟರ್ಸ್‌ನವರು ನೆರವಾಗಿದ್ದಾರೆ. ಎರಡೇ ದಿನಗಳಲ್ಲಿ ಡಿ.ಟಿ.ಪಿ. ಮುಗಿಸಿಕೊಟ್ಟಿದ್ದಾರೆ. ಅವರ ಉಪಕಾರವನ್ನು ಸ್ಮರಿಸುವೆವು.

ಬೆಂಗಳೂರು
ಫೆಬ್ರುವರಿ ೨೦೦೨

ಶ್ರೀನಿವಾಸ ಹಾವನೂರ
(ವಿಶ್ವಸ್ಥ ಸಮಿತಿಯ ಪರವಾಗಿ)

# ಸಮಗ್ರ ಪಾ. ವೆಂ. ಆಚಾರ್ಯ

'ಕಸ್ತೂರಿ'ಯ ಸಮರ್ಥ ಸಂಪಾದಕರು,
'ಓದುಗರೊಡನೆ ಹರಟೆ' ಹೊಡೆದ ಲಾಂಗೂಲಾಚಾರ್ಯರು,
ಪ್ರಥಮ ದರ್ಜೆಯ ಚಿಂತಕರು,
ಸರ್ವಕುತೂಹಲಿ - ಸರ್ವಜ್ಞಾಚಾರ್ಯರು,
ಪ್ರತಿಭಾವಂತ ಪಂಡಿತರು;

ಈ ರೀತಿಯ ನಾನಾ ಉಪಾಧಿಗಳನ್ನು ಪಡೆದಿದ್ದ ದಿವಂಗತ ಪಾಡಿಗಾರು ವೆಂಕಟರಮಣ ಆಚಾರ್ಯರ ಸಮಗ್ರ ಬರಹಗಳನ್ನು ಪ್ರಕಟಿಸುವ ಯೋಜನೆಯಿತ್ತು.

## ಕೃತಿ ರಚನೆ

ಪಾ.ವೆಂ. ಅವರ ಸಾಹಿತ್ಯ ಕಾರ್ಯವನ್ನು ಈ ಮೂರು ಕಾಲಖಂಡಗಳಲ್ಲಿ ಗುರುತಿಸಬಹುದು.

- ೧೯೩೨ರಿಂದ - ೧೯೪೨ : ಉಡುಪಿಯಲ್ಲಿದ್ದಾಗ, 'ಅಂತರಂಗ', 'ಜಯಕರ್ನಾಟಕ' ಮುಂತಾದ ಪತ್ರಿಕೆಗಳಲ್ಲಿ ಬಂದಂಥ ಕತೆ - ಕವನಗಳ ರಚನೆ. ಅವರ ಮೊದಲ ಕವನ 'ಉದ್ಧಾರ' ಎಂಬುದು 'ಜಯಕರ್ನಾಟಕ'ದಲ್ಲಿ ಪ್ರಕಟವಾಗಿದೆ. (೧೯೩೩). ಅವರ ಪ್ರಥಮ ಸಣ್ಣಕತೆ 'ಮಧುವನ' ಎಂಬ ಕಥಾಸಂಗ್ರಹದಲ್ಲಿ ಬಂದಿದೆ (೧೯೩೫).
- ೧೯೪೨ರಿಂದ ೧೯೭೪ : ಕರ್ಮವೀರ, ಕಸ್ತೂರಿಗಳಲ್ಲಿ ಪ್ರತಿ ಸಂಚಿಕೆಯಲ್ಲಿಯೂ ಪ್ರಕಟವಾದ ಬರಹಗಳು. ಅವರ ಸಾಹಿತ್ಯ ಕೃತಿಗಳ ಬಲುದೊಡ್ಡ ಮೊತ್ತ ಈ ಕಾಲದ್ದು.
- ೧೯೭೪ ರಿಂದ ೧೯೯೨ : ನಿವೃತ್ತರಾದ ಮೇಲೆ ತುಷಾರ, ಸುಗುಣಮಾಲಾ, ತರಂಗ ಮುಂತಾದ ಪತ್ರಿಕೆಗಳಲ್ಲಿ ಪ್ರಕಟವಾದ ಸರ್ವ ವಿಧದ ಬರಹಗಳು.

ತುಳು ಕವನಗಳ ರಚನೆಯೂ ಇದೇ ಅವಧಿಯದು. ಜೊತೆಗೆ ತಮ್ಮ 'ಕಸ್ತೂರಿ'ಯಲ್ಲಿಯೇ ಪ್ರತಿ ತಿಂಗಳು ವಿವೇಚಿಸಲಾದ 'ಪದಾರ್ಥ ಚಿಂತಾಮಣಿ'.

ಪಾ. ವೆಂ. ಅವರ ಒಟ್ಟಿನ ಬರವಣಿಗೆ ಹತ್ತು ಸಾವಿರ ಪುಟಗಳನ್ನು ಮೀರುವುದಾಗಿದ್ದರೂ ಪುಸ್ತಕರೂಪದಲ್ಲಿ ಬಂದದ್ದು ತೀರಾ ಕಡಿಮೆ. 'ರಶಿಯದ ರಾಜ್ಯಕ್ರಾಂತಿ' ಮತ್ತು 'ಸ್ವತಂತ್ರ ಭಾರತ' ಎಂಬೆರಡು ಪ್ರಚಲಿತ ರಾಜಕೀಯ ವಿಶ್ಲೇಷಣೆಗಳು, ನಾಲ್ಕು ಹರಟೆಗಳ ಸಂಗ್ರಹಗಳು, ಮತ್ತು ಎರಡೇ ಕವನ ಸಂಗ್ರಹಗಳು. ಅಲ್ಲದೆ ಎದ್ದು ಕಾಣುವ ಕೃತಿಗಳೆಂದು 'ಸುಭಾಷಿತ ಚಮತ್ಕಾರ' ಹಾಗೂ 'ಪದಾರ್ಥ ಚಿಂತಾಮಣಿ' ಇವನ್ನು ಹೆಸರಿಸಬೇಕು.

## ಪಂಚಮುಖಿಗಳು

ಪಾ. ವೆಂ. ಆಚಾರ್ಯರ ಕೃತಿರಚನೆಯ ಭೂಮಿಕೆಯನ್ನು ಐದು ಮುಖಗಳಲ್ಲಿ ರೇಖಿಸಬಹುದು. ಅವೆಂದರೆ - ಕಲ್ಪಕತೆ; ಚಿಂತನಪರತೆ; ಶಬ್ದಾಸಕ್ತಿ ; ಪತ್ರಿಕಾಧರ್ಮ; ಅಣಕ ಪ್ರವೃತ್ತಿ.

ಕಲ್ಪಕತೆ ಅವರ ಕವನ, ಕತೆಗಳಲ್ಲಿ ವ್ಯಕ್ತವಾದರೆ, ಚಿಂತನಪರತೆಯು ಜೀವನ ಸಮಸ್ಯೆಗಳ ಕುರಿತ ವಿಚಾರಮಂಥನದಲ್ಲಿ ವ್ಯಕ್ತವಾಗಿದೆ. ಶಬ್ದಾಸಕ್ತಿಯಂತೂ 'ಕಸ್ತೂರಿ'ಯು ಆರಂಭವಾದ ಕಾಲದಿಂದ ತೋರಿಬಂದಿದೆ. ಪತ್ರಿಕಾಧರ್ಮದ ಬಗೆಯನ್ನು ಅವರು ಪಾಲಿಸುವುದಕ್ಕೂ 'ಕಸ್ತೂರಿ'ಯೇ ಕಾರಣವಾಯ್ತು. ಅಣಕ ಪ್ರವೃತ್ತಿ ಅವರಿಗೆ ಜನ್ಮಜಾತವಾಗಿದ್ದು, ಅವರ ಹೆಚ್ಚಿನ ಕೃತಿರಚನೆಗೆ ಅರ್ಥಾತ್ ಹರಟೆಗೆ ಪ್ರಮುಖ ಪ್ರೇರಣೆಯಾಗಿ ನೆಲೆಗೊಂಡಿದೆ. ಇವು ಐದೂ ಭೂಮಿಕೆಗಳ ಹಿಂದೆ ಅಖಂಡವಾದ ವ್ಯಾಸಂಗ ಪ್ರಿಯತೆ - ಇದ್ದುದನ್ನು ನಾವು ಗಣಿಸತಕ್ಕುದು. ತುಸು ವಿವರಗಳನ್ನು ಕೊಡೋಣವೆ?

ಅನೇಕರಂತೆ ಪಾ.ವೆಂ. ತಮ್ಮ ಲೇಖನವನ್ನು ಕವನಿಸುವುದರಿಂದಲೇ ಆರಂಭಿಸಿದರು - ಹನ್ನೊಂದು ವರ್ಷದವರಿದ್ದಾಗ. ಆ ಮುಂದೆಯೂ ಕವಿತಾರಚನೆಗೆ ಮನಗೊಟ್ಟರೂ, ನಿಯಮಿತವಾಗಿ ಬರೆಯುವುದಕ್ಕೆ ಆಗಲೆ ಇಲ್ಲ. ಆದರೆ ಕಾಲ ಮುಂದೆ ಸರಿದಂತೆ ಅವರ ಪ್ರಯೋಗಶೀಲ ಪ್ರವೃತ್ತಿ ಕವಿತೆಯಲ್ಲಿ ನವನವೀನ ಪ್ರಯೋಗ ಮಾಡುವುದಕ್ಕೆ ಪ್ರೇರಿಸಿತು. ಅವರ ಮೊದಲ ಕವನ ಸಂಗ್ರಹ 'ನವನೀರದ'ಕ್ಕೆ

ಆಗಿನ ಮುಂಬಯಿ ಸರಕಾರದಿಂದ ಪಾರಿತೋಷಕವೂ ಲಭಿಸಿತು. ಅನಂತರ ಪ್ರಕಟವಾದ ಸಂಗ್ರಹದ ಹೆಸರು 'ಕೆಲವು ಪದ್ಯಗಳು'. ಈ 'ಕೆಲವು' ಎನ್ನುವುದು ಅವರ ಒಟ್ಟಿನ ಕವನ ರಚನೆಗೂ ಅನ್ವಯಿಸುತ್ತದೆ.

ವಿಶೇಷವೆಂದರೆ 'ಮಂಕುತಿಮ್ಮ'ನ ಮಾದರಿಯಲ್ಲಿ ಅವರು 'ಪೆಂಗೋಪದೇಶ'ದ ಪದ್ಯಗಳನ್ನು ರಚಿಸಿದ್ದಾರೆ. ಹೆಚ್ಚಿನವು ಈ ಮುಂಚೆ ಪ್ರಕಟವಾಗಿಲ್ಲ. ಇದೊಂದು ಮಾದರಿ :

ಬದುಕು ಖಟರಾ ಬಸ್ಸು ; ವಿಧಿಯದರ ಡ್ರೈವರನು
ಕುಡಿದು ಹೊಡೆಯುತ್ತಾನೆ ಎರಡು ಕಾಣುತ್ತ
ಗಟರವೊ ಮರವೊ ಸಂಕವೊ ಟ್ರಕ್ಕೊ ಗೋಡೆಯೊ
ಮಡಿವವನಿಗಾವುದೇನೊ ಎಲವೊ ಪೆಂಗೇ.

ಸಾಹಿತ್ಯಿಕ ಬರಹಗಳಲ್ಲಿ ಪಾವೆಂ ಅವರದು ಇನ್ನೊಂದು ಬಗೆಯ ವಿಶಿಷ್ಟ ಕೊಡುಗೆ. ಸಂಸ್ಕೃತ ಸಾಹಿತ್ಯ, ಹಳಗನ್ನಡ ಮತ್ತು ಭಾಷಾ ವಿಷಯಗಳಿಗೆ ಸಂಬಂಧಿಸಿದ ಲೇಖಗಳು, ಮೌಲಿಕ ಅಂಶಗಳನ್ನು ಒಳಗೊಂಡಿವೆ. 'ಸಂಸ್ಕೃತ ಕಾವ್ಯಗಳಲ್ಲಿಯ ಪ್ರಣಯ ವಿವೇಚನೆ' ಎಂಬ ಲೇಖ ಗಮನಾರ್ಹವಾಗಿದೆ. ಇತ್ತ ನೇಮಿಚಂದ್ರ, ಕುಮಾರವ್ಯಾಸರ ಬಗೆಗೆ ನವೀನ ಆಲೋಚನೆಗಳನ್ನು ಮಂಡಿಸಿದ್ದಾರೆ. ಸಮಕಾಲೀನ ಕನ್ನಡ ಸಾಹಿತ್ಯದ ಬಗ್ಗೆ ಆಳವಾಗಿ ಯೋಚಿಸಿ ಬರೆದದ್ದು ಕಂಡು ಬಾರದಿದ್ದರೂ ತಮ್ಮ ಸಮಕಾಲೀನ - ಆದರೆ ಹಿರಿಯರಾದ ಸಾಹಿತಿ, ಪತ್ರಕರ್ತರ ಬಗ್ಗೆ ಮನನೀಯವಾದ ವ್ಯಕ್ತಿಚಿತ್ರಗಳನ್ನು ಕೊಟ್ಟಿದ್ದಾರೆ. ಶಿವರಾಮ ಕಾರಂತ, ಶಂ.ಬಾ. ಜೋಶಿ ಇವರ ವ್ಯಕ್ತಿ ಚಿತ್ರಣದ ಜೊತೆಗೆ ಅವರ ಕೃತಿಗಳ ಆಳವಾದ ಅಭ್ಯಾಸ ಮಾಡಿ ಬರೆದ ಪ್ರಬಂಧಗಳು ಆಚಾರ್ಯರ ವೈದುಷ್ಯಕ್ಕೆ ನಿದರ್ಶನಗಳಾಗಿವೆ. ಇತ್ತ ತಮ್ಮ ಸ್ನೇಹಿತರಾಗಿದ್ದ ದ. ಬಾ. ಕುಲಕರ್ಣಿಯವರ ವ್ಯಕ್ತಿಚಿತ್ರದಲ್ಲಿ ಆತ್ಮೀಯತೆ ಎದ್ದು ತೋರುವಂತಿದೆ.

ಇವೆಲ್ಲವನ್ನು ಮೀರಿಸಿದುವೆಂದರೆ ಅವರ ಮೌಲಿಕ ಚಿಂತನೆಯನ್ನೊಳಗೊಂಡ ಪ್ರಬಂಧಗಳು. ಅವು ಆಚಾರ್ಯರ ವ್ಯಾಸಂಗಪ್ರೇರಿತವಾದ ಆದರೆ ಮೂಲಭೂತವಾದ, ವಿಚಾರಗಳನ್ನು ಒಳಗೊಂಡಿವೆ. 'ಜೀವನಕ್ಕೆ ಅರ್ಥವುಂಟೆ?' ಅದರಂತೆ, 'ಮಾನವ

ಪ್ರವೃತ್ತಿ ಹಾಗೂ ಮೌಲ್ಯಗಳು', ಪಾಪಪ್ರಜ್ಞೆ, ಆಜ್ಞಾಪಾಲನೆ, ಆತ್ಮಸಾಕ್ಷಿ - ಈ
ಬಗೆಯ ಹತ್ತಾರು ವಿಷಯಗಳನ್ನು ಅವರು ಎತ್ತಿಕೊಂಡಿದ್ದಾರೆ. ಪಕ್ವ ಆಲೋಚನೆಯ
ಅಭಿವ್ಯಕ್ತಿ ಇಲ್ಲಿದೆ. ಕೆಲವು ಪ್ರಬಂಧಗಳು ಧಾರ್ಮಿಕ, ಶೈಕ್ಷಣಿಕ ಸಮಸ್ಯೆಗಳನ್ನು
ವಿವೇಚಿಸುತ್ತವೆ. ಉದಾ.ಗೆ ಶಾಸ್ತ್ರಗಳನ್ನು ಏಕೆ ಪಾಲಿಸಬೇಕು? ಶಿಕ್ಷಣ ಮತ್ತು
ಜೀವನ ಮೌಲ್ಯಗಳು, ಸಾಮಾಜಿಕ ಬದಲಾವಣೆ ಹಾಗೂ ಮನೋವೃತ್ತಿಗಳು. ಇವನ್ನು
ಪರಿಶೀಲಿಸಿದಾಗ ಪಾವೆಂ ಪ್ರಥಮ ದರ್ಜೆಯ ಚಿಂತಕರೆಂಬುದು ಮನವರಿಕೆ
ಯಾಗುವುದು. ಅವರ 'ಬ್ರಾಹ್ಮಣರೇನು ಮಾಡಬೇಕು?' ಎಂಬ ಸವಿವರ ವಿಶ್ಲೇಷಣಾ
ಪ್ರಬಂಧವನ್ನೂ ವಿಶೇಷವಾಗಿ ಹೆಸರಿಸಬೇಕು. ಅತ್ಯಂತ ನಿಷ್ಪಕ್ಷವಾದ ರೀತಿಯಲ್ಲಿ
ವಿಷಯ ಮಂಡನೆ ಮಾಡಿದ್ದಾರೆ.

'ಕಸ್ತೂರಿ'ಗಾಗಿ ಬರೆದ ಲೇಖಗಳು ೬೦೦ರ ಸಂಖ್ಯೆಯನ್ನು ಮೀರಿವೆ. ಅವನ್ನು
ಹೀಗೆ ವರ್ಗೀಕರಿಸಬಹುದು :

ಅ) ಜಗದ್ವಿಖ್ಯಾತ ವ್ಯಕ್ತಿಗಳ ಚರಿತ್ರೆ

ಆ) ದೇಶ - ವಿದೇಶಗಳ ಪರಿಚಯ

ಇ) ಜಗತ್ತಿನಲ್ಲಿ ನಡೆದ ವೈಚಿತ್ರ್ಯಗಳು.

ಈ) ಭಾರತದ ಆಗು -ಹೋಗುಗಳು.

ಉ) ವೈಜ್ಞಾನಿಕ ವಿಷಯಗಳು.

ಇಷ್ಟೊಂದು ವೈವಿಧ್ಯಮಯ ಲೇಖಗಳಿಗಾಗಿ ಪಾವೆಂ. ಮಾಹಿತಿಯನ್ನು
ಕಲೆಹಾಕುವಲ್ಲಿ ಅವನ್ನು ಪರಿಶೋಧಿಸಿ ವ್ಯವಸ್ಥಿತವಾಗಿ ನಿರೂಪಿಸುವಲ್ಲಿ ಪಟ್ಟ ಶ್ರಮ
ಅಷ್ಟಿಷ್ಟಲ್ಲ.

ಮೇಲಿನವುಗಳಲ್ಲಿ ಅವರ ವೈಜ್ಞಾನಿಕ ಲೇಖನಗಳನ್ನು ಎತ್ತಿ ಹೇಳಬೇಕು.
ಕಸ್ತೂರಿಗಾಗಿ ಇತರ ವಿಷಯಗಳ ಬಗ್ಗೆ ಲೇಖಗಳು ವಿಪುಲವಾಗಿ ಬರುತ್ತಿದ್ದರೂ
ವಿಜ್ಞಾನದ ಬಗ್ಗೆ ಬರೆಯುವ ಶ್ರಮವನ್ನು ವಹಿಸುವವರಿರಲಿಲ್ಲ. ಆದರೆ ಆ ವಿಷಯ
ಕಸ್ತೂರಿಯಲ್ಲಿ ಬರಲೇಬೇಕಲ್ಲವೆ, ಹೀಗಾಗಿ 'ಕಸ್ತೂರಿ'ಯ ದಿನಗಳಲ್ಲಿ ಪಾವೆಂ
ಅವರ ವಾಚನದ ಬಹುಪಾಲು ವಿಜ್ಞಾನ ವಿಷಯಕ್ಕೇ ಮೀಸಲಾಗಿಟ್ಟಿತು. ಅವರೇನೂ
ವಿಜ್ಞಾನವನ್ನು ಕಾಲೇಜು ಮಟ್ಟದಲ್ಲಿ ಓದಿದವರಲ್ಲ. ಈಗ ಅಂಥ ಬರಹಗಳನ್ನು

ಇಂಗ್ಲೀಷ್‌ನಲ್ಲಿ ಓದಿ ತಾವು ಅದನ್ನು ಮೊದಲಿಗೆ ಅರ್ಥ ಮಾಡಿಕೊಳ್ಳಬೇಕಿತ್ತು. ಅದರ ವಿಷಯ ಪೂರ್ತತೆಗೆ ಬೇರೆ ಲೇಖಗಳನ್ನು ಓದಬೇಕಿತ್ತು; ಕನ್ನಡ ಪಾರಿಭಾಷಿಕ ಪದಗಳನ್ನು ಸೃಷ್ಟಿಸಿಕೊಂಡು ಆಮೇಲೆ ಕನ್ನಡ ಲೇಖವಾಗಿ ಸಿದ್ಧಗೊಳಿಸಬೇಕು. ಪಾವೆಂ. ಮೊದಲ ಸಂಚಿಕೆಯಿಂದ ಹಿಡಿದು ೧೮ ವರ್ಷಗಳ ಪರ್ಯಂತ ಹಾಗೆ ಮಾಡಿದ್ದಾರೆ. ಆ ಲೆಕ್ಕದಲ್ಲಿ ಕನ್ನಡದ ಗಣ್ಯ ವಿಜ್ಞಾನ - ಲೇಖಕರೆಂದೇ ಪರಿಗಣಿಸತಕ್ಕುದು.

ಅವರು ಪ್ರಾಯಶಃ ವಿಜ್ಞಾನದ ಎಲ್ಲ ಪ್ರಕಾರಗಳಲ್ಲಿಯೂ ಕೈಯಾಡಿಸಿದ್ದಾರೆ. ಖಗೋಳ ಶಾಸ್ತ್ರ, ಭೂಭೌತಿಕ, ಸಸ್ಯ - ಪ್ರಾಣಿ ಪ್ರಪಂಚ. ಜೊತೆಗೆ ಮನೋವಿಜ್ಞಾನ, ಲೈಂಗಿಕ ವಿಜ್ಞಾನಗಳೂ ಅವರ ಗಮನವನ್ನು ಸೆಳೆದಿವೆ. ಆದರೆ ಈ ವಿಜ್ಞಾನ ಲೇಖನ ಸಮುದಾಯದಲ್ಲಿ ವೈದ್ಯಕೀಯಕ್ಕೆ ಹೆಚ್ಚಿನ ಪಾಲು ಸಂದಿದೆ. ರೋಗಗಳ ಸ್ವರೂಪವನ್ನೂ ತಿಳಿಮು ಜನ ಆರೋಗ್ಯವಂತರಾಗಿ ಬಾಳಬೇಕೆಂಬ ಸದಾಶಯವನ್ನು ನಾವು ಅಲ್ಲಿ ಗುರುತಿಸಬಹುದು. ಕೆಲವು ಪ್ರಸಿದ್ಧ ವಿಜ್ಞಾನಿಗಳ ಸಾಧನೆಯನ್ನು ವಿವರಿಸುವ ಚರಿತ್ರೆಗಳನ್ನೂ ಬರೆದಿದ್ದಾರೆ.

ಇನ್ನೀಗ ಹರಟೆಗಳು. ಅವರ ಒಟ್ಟಿನ ಕೃತಿರಚನೆಯ ದೊಡ್ಡ ಮೊತ್ತ 'ಲಾಂಗೂಲಾಚಾರ್ಯ' ಹೆಸರಿನ ಹರಟೆಗಳದ್ದೇ. ಐದುನೂರನ್ನು ಮಿಕ್ಕಿದ ಇಷ್ಟೊಂದು ಹರಟೆಗಳನ್ನು ಕನ್ನಡದಲ್ಲಿ ಬೇರಾರೂ ಬರೆದಂತಿಲ್ಲ. ಹೆಚ್ಚಿನವು ಕರ್ಮವೀರದಲ್ಲಿ ಬಂದವುಗಳು.

ಹರಟೆ ಬರೆಯುವುದಕ್ಕೆ ಏನಾದರೊಂದು ಪ್ರಕೋಪನ (provocation) ಬೇಕು. ಒಂದು ಯಃಕಶ್ಚಿತ ಘಟನೆ, ಸಣ್ಣ ವಿಚಾರ ಇಲ್ಲವೆ ಆಡಿದ ಒಂದು ಮಾತು - ಇಷ್ಟರ ಮಟ್ಟಿಗಿನ ಪ್ರಕೋಪನೆ ಅವರಿಗೆ ಸಾಕಿತ್ತು. ಹಾಗೆ ಆರಂಭಿಸಿ ತಮ್ಮ ಬಹುಶ್ರುತತ್ವದ ಬೆಂಬಲದಿಂದ ವಿಷಯವನ್ನು ವ್ಯಂಗ್ಯದ ಧಾಟಿಯಲ್ಲಿಯೆ ಮುಂದುವರಿಸುತ್ತಿದ್ದರು.

ಅನೇಕ ಹರಟೆಗಳ ಶೀರ್ಷಿಕೆಗಳೇ ಪ್ರಚೋದಕವಾಗಿವೆ : 'ನಗ್ನಾಪರಾಧ', 'ಗೋಹತ್ಯೆ ಮಾಡಿರಿ', 'ಮನುಷ್ಯ ನಗದಿದ್ದರೆ' , 'ಶ್ಮಶ್ರು(ಗಡ್ಡ) ಚಿಂತಾರತ್ನಂ', 'ನೀವು ಹೆಂಡತೀನ್ನ ಹೊಡೆಯುವುದನ್ನು ಬಿಟ್ಟಿದ್ದೀರಾ?'

'ಕಸ್ತೂರಿ' ನಿಮಿತ್ತದ ಅವರ ಪತ್ರಿಕಾಧರ್ಮವನ್ನು ತುಸು ವಿವರಿಸಬೇಕು. ಈಗಿನ ಪತ್ರಿಕಾ ವೃತ್ತಿಯೆಂದರೆ ತತ್ಕಾಲದ ಸಂಚಿಕೆಗೆ ಏನು ಬೇಕೊ ಅದನ್ನು ಸೆಳೆದುಕೊಂಡು, ಎಷ್ಟು ಬೇಕೊ ಅಷ್ಟಕ್ಕೇನೆ ಗೀಚುವುದನ್ನು ಮುಗಿಸಿ, ಆಮೇಲೆ ಆ ಲೇಖವನ್ನು (ಆ ಲೇಖಕನನ್ನೂ) ಮರೆತುಬಿಡುವುದಾಗಿದೆ. ಪಾ. ವೆಂ. ಅವರಿಗೆ ಅದೊಂದು ಶ್ರದ್ಧೆಯಿಂದ ಮಾಡಬೇಕಾದ ಧರ್ಮಕಾರ್ಯವೇ ಎಂಬಂತಿದ್ದಿತು. ವಿಷಯವೊಂದರ ಬಗ್ಗೆ ಕುತೂಹಲದ ಆಸಕ್ತಿ ಮೂಡಿತೆಂದರೆ ತಾವು ಪೂರ್ವಭಾವಿಯಾಗಿ ತಿಳಿದುಕೊಂಡು ಸೂಕ್ತ ಲೇಖಕರನ್ನು ಹುಡುಕುತ್ತಿದ್ದರು. ಅವರಿಂದ ಬರೆಯಿಸುವುದು, ಅದರ ಸುಧಾರಣೆಗೆ ಸಲಹೆ ಕೊಟ್ಟು ಮತ್ತೆ ಬರೆಯಿಸುವುದು; ಅನಂತರವೇ ಅದನ್ನು ಪ್ರಕಟಿಸುವುದಾಗಬೇಕು. ಈ ಸಂದರ್ಭದಲ್ಲಿ ಪಾ.ವೆಂ. ಹಿರಿ ಕಿರಿಯರೆನ್ನದೆ ಸತತವಾಗಿ ಪತ್ರವ್ಯವಹಾರ ಮಾಡುತ್ತಿದ್ದರು. ಹಳೆಯ 'ಕಸ್ತೂರಿ'ಯ ಲೇಖಕರು ಯಾರನ್ನು ಕೇಳಿದರೂ, ಪಾ.ವೆಂ. ಅವರ ಈ ವಿಶೇಷತೆಯನ್ನು ಬಾಯ್ತುಂಬ ಹೊಗಳುತ್ತಾರೆ.

ಕಸ್ತೂರಿ ವಸ್ತುಶಃ ಡೈಜೆಸ್ಟ್ ಪತ್ರಿಕೆ. ನಾನಾ ಕಡೆಗಳಿಂದ ಮಧುವನ್ನು ತಂದು ಇರಿಸಿದ ಜೇನ್ಗೂಡದ ಹಾಗೆ. ಪಾವೆಂ ಅವರ ಮೇಲ್ಕಂಡ ಪತ್ರಿಕಾಧರ್ಮದಿಂದಾಗಿ ಆ ಜೇನುತುಪ್ಪ ತರುಣರಿಂದ ಮುದುಕರ ವರೆಗೆ ಸರ್ವಗ್ರಾಹ್ಯವಾಯಿತು.

ಈ 'ಕಸ್ತೂರಿ' ಪತ್ರಿಕೆಯೇ ಅವರ ಶಬ್ದಾಸಕ್ತಿಗೆ ಪುಟಕೊಟ್ಟಿತು. ಮುದ್ದಣ, ಗೋವಿಂದ ಪೈಗಳಂಥ ಶಬ್ದಾಸಕ್ತರು ಬಾಳಿದ ಪ್ರದೇಶದಿಂದ ಅವರು ಬಂದವರಾಗಿ, ಅವರಲ್ಲಿ ಈ ಪ್ರವೃತ್ತಿ ಮೊದಲಿನಿಂದಲೇ ಇದ್ದಿರಬೇಕು. ಕಸ್ತೂರಿಯ ಆರಂಭದ ಸಂಚಿಕೆಗಳಲ್ಲಿ ಕ್ರಮವಾಗಿ ಬರತೊಡಗಿದ 'ನಿಮ್ಮ ಶಬ್ದ ಭಂಡಾರ ಬೆಳೆಯಲಿ' ಎಂಬುದರಲ್ಲಿ ಅನಂತರ ಬರತೊಡಗಿದ 'ಪದ - ಅರ್ಥ ಚಿಂತಾಮಣಿ'ಯ ನಿಯಮಿತ ವಿವೇಚನೆಯಲ್ಲಿ ಅದು ಸುವ್ಯಕ್ತವಾಗಿದೆ. ಶಬ್ದದ ಪೂರ್ವಾಪರ, ಅದರ ಜ್ಞಾತಿಪದಗಳು, ಅದರಿಂದ ತಿಳಿದು ಬರುವ ಸಾಂಸ್ಕೃತಿಕ ಅಂಶಗಳು - ಇವುಗಳ ಆಳಕ್ಕೆ ಇಳಿದು 'ಚಿಂತಾಮಣಿ' ರತ್ನವನ್ನೇ ಹೊರತೆಗೆದರೆನ್ನಬೇಕು. ಇಲ್ಲಿ ಶಬ್ದಗಳ ಗಂಟನ್ನು ಬಿಚ್ಚುವುದಲ್ಲದೆ, ಅನ್ಯ ಭಾಷಾ ಶಬ್ದಗಳ ನಂಟನ್ನು ತೋರ್ಪಡಿಸಿದ್ದು ಕಂಡುಬರುತ್ತದೆ. ಈ ವೈದುಷ್ಯದಿಂದಾಗಿ ಕಿಟೆಲ್, ಡಿ.ಎಲ್. ನರಸಿಂಹಾಚಾರ್ಯ

ಮತ್ತು ಜಿ. ವೆಂಕಟಸುಬ್ಬಯ್ಯ - ಇವರಿಗೆ ಸಮನಾಗಿಯೇ ಪಾ. ವೆಂ. ಅವರನ್ನು ಹೆಸರಿಸಬೇಕಾಗುವುದು.

ಪಾವೆಂ. ಅವರ ಇನ್ನೊಂದು ವಿಶೇಷತೆ ಎಂದರೆ ಹತ್ತಾರು ವಿಷಯಗಳಲ್ಲಿ ಏಕಕಾಲಕ್ಕೆ ಚಿಂತನೆ ನಡೆಸುತ್ತಿದ್ದುದು. ಬರಹವಂತೂ ಸರಿಯೇ, ಅವರೊಡನೆ ಮಾತಿಗೆ ನಿಂತಾಗಲೂ ಇದು ಮನವರಿಕೆಯಾಗುವಂತಿತ್ತು. ವಿಧವಿಧವಾದ, ಎಷ್ಟೋ ಸಲ ಒಂದಕ್ಕೊಂದು ಸಂಬಂಧವಿಲ್ಲ - ಎನಿಸುವಂತಹ ವಿಚಾರಗಳು ಕಾರಂಜಿಯ ನೀರಿನಂತೆ ಚಿಮ್ಮುತ್ತಿದ್ದುವು. ಸ್ಫುರಣ -ಎನ್ನುವುದು ಹೀಗೇ ಕಾಣಿಸಿಕೊಳ್ಳುವುದಲ್ಲವೆ! ಈ ಸ್ಫುರಣವೇ ನವನವೋನ್ಮೇಷ ಶಾಲಿನಿಯಾದ ಪ್ರತಿಭೆ ಎನಿಸಿಕೊಳ್ಳುತ್ತದೆ. ಇಂಥ ಪ್ರತಿಭೆ ಬೇಂದ್ರೆಯವರಲ್ಲಿ ಇದ್ದಿತು. ಅವರ ಅನಂತರ ಹೆಸರಿಸಬೇಕಾದವರು ಪಾ. ವೆಂ. ಆಚಾರ್ಯರೇ.

## ಸಮಾರೋಪ

ಪಾ. ವೆಂ. ಆಚಾರ್ಯರು ಕಲಿತದ್ದು ಕಡಿಮೆ ; ಓದಿದ್ದೇ ಜಾಸ್ತಿ. ಅವರ ಈ ಓದು ಬಿಡುವರಿಯದ್ದು. ಅದೇನೂ ವ್ಯವಸ್ಥಿತವಾದದ್ದಲ್ಲ. ಆದರೆ ಓದಿದ್ದನ್ನು ತಮ್ಮ ಬೌದ್ಧಿಕ ಜರಡಿಯಲ್ಲಿ ಹಿಡಿದು ಗಟ್ಟಿಯಾದ ಆಲೋಚನೆಗಳನ್ನಷ್ಟೆ ಉಳಿಸಿಕೊಂಡರು. ಇನ್ನು ಸಮಕಾಲೀನ ಘಟನೆಗಳಿದ್ದರೆ ತೀವ್ರ ಪ್ರಭಾವಕ್ಕೊಳಗಾಗುತ್ತಿದ್ದರು. ಅನಂತರದ ತಮ್ಮ ಪ್ರತಿಕ್ರಿಯೆಯನ್ನು, ಹಿಂದು ಮುಂದುಗಳನ್ನು ಪರಾಮರ್ಶಿಸಿ, ಸಾರಸಾರ ವಿವೇಕದಿಂದ ನಿರೂಪಿಸುತ್ತಿದ್ದರು. ಈ ಕ್ರಮದಲ್ಲಿ ಸ್ವಂತದ ಅಭಿರುಚಿ. ಮತ್ತು ಸ್ವತಂತ್ರ ದೃಷ್ಟಿ - ಇವನ್ನು ತಮ್ಮ ಬದುಕು ಮತ್ತು ಬರಹಗಳಲ್ಲಿ ಉಳಿಸಿಕೊಂಡಿದ್ದರು.

## ಸಮಗ್ರ ಪಾ. ವೆಂ.

ಪಾ. ವೆಂ. ಆಚಾರ್ಯರ ಸಮಸ್ತ ಬರಹಗಳನ್ನು ಹೊರತರುವ ಯೋಚನೆ ಬಂದು, ಪಾವೆಂ, ವಿಶ್ವಸ್ಥ ಸಮಿತಿಯನ್ನು ರಚಿಸಲಾಯಿತು. (ಸದಸ್ಯರು: ಶ್ರೀ ಎಂ. ವಿ. ಪಾಡಿಗಾರ, ಪ್ರೊ. ರಾಧಾಕೃಷ್ಣ ಆಚಾರ್ಯ ಮತ್ತು ಡಾ. ಶ್ರೀನಿವಾಸ ಹಾವನೂರ) ಅವರ ಬರಹಗಳೆಲ್ಲವನ್ನು ಈ ರೀತಿ ವಿಂಗಡಿಸಲಾಗಿದೆ.

- ಲಾಂಗೂಲಾಚಾರ್ಯ - ಹೆಸರಿನ ಹರಟೆಗಳು, ನಗೆಬರಹಗಳು (ಸುಮಾರು ೫೦೦)
- ಉಡುಪಿಯ ಪರಿಸರದ ಲೇಖಗಳು (ತುಳು ವಿಷಯವೂ ಸೇರಿ)
- ಜಗದ್ವಿಖ್ಯಾತ ವ್ಯಕ್ತಿಗಳು (ಚರಿತ್ರಾತ್ಮಕ)
- ಜೀವನ ಮಂಥನ (ಮೌಲಿಕ ವಿಚಾರಗಳು)
- ಸಾಹಿತ್ಯ ಸ್ಫುರಣ (ಹಿರಿಯ ಸಾಹಿತಿಗಳ ವ್ಯಕ್ತಿಚಿತ್ರ ಸಹಿತ)
- ಜಗತ್ತಿನಲ್ಲಿ ಜರುಗಿದ ವೈಚಿತ್ರ್ಯದ ಘಟನೆಗಳು
- ವೈಜ್ಞಾನಿಕ ಆವಿಷ್ಕಾರ
- ಲಲಿತ ಸೃಷ್ಟಿ (ಕವನ, ಸಣ್ಣಕತೆ, ಪೆಂಗೋಪದೇಶ ಇ.)
- ಪ್ರಪಂಚ ಪರ್ಯಟನ (ವಿವಿಧ ದೇಶಗಳ ತ್ರೋಟಕ ಪರಿಚಯ)
- ಪಾ. ವೆಂ. ಕಂಡ ಭಾರತ (ಪ್ರಚಲಿತ ಸಮಸ್ಯೆಗಳ ವಿಶ್ಲೇಷಣೆ)
- ಸುಭಾಷಿತ ಚಮತ್ಕಾರ (ಮರುಮುದ್ರಣ)

ಈ ಯೋಜನೆಯ ಪ್ರಕಾರ ಇದುವರೆಗೆ ಪ್ರಕಟವಾದ ಕೃತಿಗಳೆಂದರೆ -

೧. **ಆಯ್ದ ಲಲಿತ ಪ್ರಬಂಧಗಳು**
ಸಂ. : ಅ. ರಾ. ಮಿತ್ರ ಹಾಗೂ ಶ್ರೀನಿವಾಸ ಹಾವನೂರ
ಪ್ರ. : ಪ್ರಿಸಮ್ ಬುಕ್ಸ್, ಬೆಂಗಳೂರು, ೨೦೦೦.

೨. **ಆಯ್ದ ನಗೆಬರಹಗಳು**
ಸಂ. : ಶ್ರೀನಿವಾಸ ಹಾವನೂರ ಮತ್ತು ಅ. ರಾ. ಮಿತ್ರ
ಪ್ರ. : ಪ್ರಿಸಮ್ ಬುಕ್ಸ್, ಬೆಂಗಳೂರು, ೨೦೦೦.

೩. **ಉಡುಪಿಯ ಪರಿಸರದಲ್ಲಿ ಪಾವೆಂ. ಆಚಾರ್ಯರು**
ಸಂ.: ಶ್ರೀನಿವಾಸ ಹಾವನೂರ
ಪ್ರ.: ಪ್ರಸಾಧನ ಪ್ರಕಾಶನ, ಬೆಂಗಳೂರು, ೨೦೦೧.

೪. **ಬಯ್ಯಮಲ್ಲಿಗೆ (ತುಳು ಕವನ ಸಂಗ್ರಹ)**
ಪ್ರ : ಕರ್ನಾಟಕ ತುಳು ಸಾಹಿತ್ಯ ಅಕಾಡೆಮಿ, ೨೦೦೧.

೫.	**ಚಿತ್ರ ವಿಚಿತ್ರ ಈ ಜಗತ್ತು**
ಸಂ. : ಎಸ್. ಎಲ್. ಶ್ರೀನಿವಾಸ ಮೂರ್ತಿ
ಪ್ರ. : ಸಾಹಿತ್ಯ ಪ್ರಕಾಶನ, ಹುಬ್ಬಳ್ಳಿ, ೨೦೦೧.
- ಇತ್ತೀಚಿನವು -

೬.	**ಇವರೇ ಲಾಂಗೂಲಾಚಾರ್ಯರು ! ( ಆಯ್ದ ಹರಟೆಗಳು)**
ಸಂ. : ಶ್ರೀನಿವಾಸ ಹಾವನೂರ ಮತ್ತು ಎಸ್. ಎಲ್. ಶ್ರೀನಿವಾಸಮೂರ್ತಿ
ಪ್ರ. : ರಾಷ್ಟ್ರಕವಿ ಎಂ. ಗೋವಿಂದ ಪೈ ಸಂಶೋಧನ ಕೇಂದ್ರ, ಉಡುಪಿ. ೨೦೦೨.

೭.	**ಹಿಂದೂ - ಮುಸ್ಲಿಂ ಮತ್ತು ಇತರ ಸಣ್ಣ ಕತೆಗಳು**
ಶ್ರೀ ಬನ್ನಂಜೆ ರಾಮಾಚಾರ್ಯರ ಮುನ್ನುಡಿಯೊಡನೆ
ಸುಮಂತ ಪ್ರಕಾಶನ, ಉಪ್ಪಿನಕೋಟೆ, ಬ್ರಹ್ಮಾವರ - ೨೦೦೨.
ಈ ಕೆಳಗಿನವು ಪ್ರಕಟನೆಯ ಹಾದಿಯಲ್ಲಿವೆ.

೮.	**ವಿಜ್ಞಾನ ಲೇಖನಗಳು**
ಪ್ರ. : ನವಕರ್ನಾಟಕ ಪ್ರಕಾಶನ, ಬೆಂಗಳೂರು, ೨೦೦೨.

೯.	**ಜಗದ್ವಿಖ್ಯಾತರು**
ಪ್ರ. : ಪಾವೆಂ. ವಿಶ್ವಸ್ಥ ಸಮಿತಿ, ಹುಬ್ಬಳ್ಳಿ. ೨೦೦೨

೧೦.	**ಭಾರತೀಯ ಗಣ್ಯರು**
ಪ್ರ. : ಪಾವೆಂ. ವಿಶ್ವಸ್ಥ ಸಮಿತಿ, ಹುಬ್ಬಳ್ಳಿ, ೨೦೦೨.

೧೧.	**ಸುಭಾಷಿತ ಚಮತ್ಕಾರ**
ಪ್ರ. : ಸಾಹಿತ್ಯ ಭಂಡಾರ, ಬೆಂಗಳೂರು, ೨೦೦೨.
ನೆನವರಿಕೆಗಳು



# ಸಂತಸದ ನಲ್ನುಡಿ

ಕಸ್ತೂರಿ ಮಾಸಪತ್ರಿಕೆ ಕರ್ನಾಟಕದಲ್ಲಿಯೆ ಒಂದು ಹೊಸ ಪ್ರಜ್ಞಾವಂತಿಕೆಯ ಪರಂಪರೆಯನ್ನು ಸೃಷ್ಟಿಸಿತು ಎಂದರೆ ತಪ್ಪಲ್ಲ. ಇದಕ್ಕೆ ಕಾರಣ ಲಾಂಗೂಲಾಚಾರ್ಯರು ಅರ್ಥಾತ್ ಪಾ. ವೆಂ. [ಪಾಡಿಗಾರು ವೆಂಕಟರಮಣಚಾರ್ಯರು] ಎಂಬುದನ್ನು ಅಲ್ಲಗಳೆಯಲಾಗುವುದಿಲ್ಲ. ಒಂದು ಕಾಲದಲ್ಲಿ ಕರ್ನಾಟಕ ಸಾಹಿತ್ಯಿಕ ಕ್ಷೇತ್ರದಲ್ಲಿ "ಪ್ರಬುದ್ಧ ಕರ್ನಾಟಕ" ಮತ್ತು "ಜಯ ಕರ್ನಾಟಕ" ಎಂಬ ಎರಡು ಪ್ರಮುಖ ಪತ್ರಿಕೆಗಳಲ್ಲಿ ಉಡುಪಿಯ ಇಬ್ಬರು ತರುಣ ಕವಿಗಳ ಪೈಪೋಟಿ ಎಲ್ಲರ ಗಮನ ಸೆಳೆಯುತ್ತಿತ್ತು. ಒಂದು ಸಂಚಿಕೆಯಲ್ಲಿ "ಪಾ.ವೆಂ."ರವರ ಕವಿತೆ ಬಂದರೆ ಮುಂದಿನ ಸಂಚಿಕೆಯಲ್ಲಿ "ಸಾ.ವೆಂ." [ಸಾಂತ್ಯಾರು ವೆಂಕಟರಾಜರ] ಕವಿತೆ ಬಂದೇ ಬರುತ್ತಿತ್ತು. ಇಬ್ಬರ ಲೆಕ್ಕಣಿಕೆಗಳಿಗೂ ಸರಸ್ವತಿಯ ಅನುಗ್ರಹವಿತ್ತು.

ಪಾ. ವೆಂ. ಉಡುಪಿಯಿಂದ ತೆರಳಿ ಹುಬ್ಬಳ್ಳಿ ಸೇರಿದ ಮೇಲೆ ಅವರ ವಿಶ್ವತೋಮುಖ ಪ್ರತಿಭೆ ಬೆಳೆಯಲೂ, ಬೆಳಗಲೂ ಅನುಕೂಲವಾಯಿತು. ಅವರು ವ್ಯಕ್ತಿಯಾಗಿ ವಾಮನ, ಆದರೆ ಸಾಹಿತಿಯಾಗಿ ತ್ರಿವಿಕ್ರಮ! ಎಲ್ಲಾ ವಿಚಾರಗಳನ್ನು ಸರಿಯಾಗಿ ಅಭ್ಯಸಿಸಿ ಪ್ರಬುದ್ಧತೆಯನ್ನು ಸಂಪಾದಿಸಿದ್ದರಿಂದಲೆ ಅವರು ಒಳ್ಳೆಯ ಕತೆಗಾರರಾಗಿದ್ದರು. ಅತ್ಯುತ್ತಮ ಕವಿಗಳೂ ಆಗಿದ್ದರು. ಪ್ರಬುದ್ಧ ಲೇಖಕರೂ ಆಗಿದ್ದರು. ಎಲ್ಲರನ್ನೂ ಗೆದ್ದ ಲಾಂಗೂಲಾಚಾರ್ಯರೂ ಆಗಿದ್ದರು. ಪಾ. ವೆಂ. ರವರ ಚಿಂತನಶೀಲತೆ, ರಸಾಭಿಜ್ಞತೆ, ಪದಸಿದ್ಧಿ ಅನನ್ಯವಾಗಿದ್ದವು ಎಂಬುದನ್ನು ಯಾರೂ ಒಪ್ಪಬೇಕು.

ಪ್ರಸ್ತುತ ಕಥಾ ಸಂಗ್ರಹವೂ ಅವರ ವಿಶಾಲ ಲೋಕಾನುಭವಕ್ಕೆ - ಪ್ರತಿಭಾಶಾಲೀನತೆಗೆ ಉದಾಹರಣೆಯಾಗಬಲ್ಲದು. ಮಾನವನ ಬದುಕು ವಿಶಾಲವೂ ನಿಗೂಢವೂ ಆದ ತತ್ವದ ನೆಲೆಯಾಗಿದೆ - ಸೆಲೆಯಾಗಿದೆ. ಇದರ ಸಹಸ್ರ ಮುಖಗಳ ದರ್ಶನಭಾಗ್ಯ ಎಲ್ಲರಿಗೂ ಅಲಭ್ಯವಾಗಿದೆ. ಅದು ಲಭ್ಯವೆನಿಸಿದ ಭಾಗ್ಯವಂತರಲ್ಲಿ 'ಪಾ. ವೆಂ.' ಒಬ್ಬರು. ಅವರು ಬರೆದ ಹಲವಾರು ಕತೆಗಳಲ್ಲಿ ಕೆಲವನ್ನು ಹೊಂದಿರುವ ಈ ಕಥಾ ಸಂಗ್ರಹವೂ

ಪಾ. ವೆಂ. ರವರ ಸಾಹಿತ್ಯಿಕ ಶಕ್ತಿಯನ್ನೂ ವಿಶಾಲ ಲೋಕಾನುಭವ ಪಕ್ವತೆಯನ್ನೂ ಎತ್ತಿ ತೋರಿಸುತ್ತಿದೆ.

"ಹಿಂದೂ ಮುಸ್ಲಿಂ" ಕತೆಯಲ್ಲಿನ ರಹಿಮುಲ್ಲಾಖಾನ್ ಮತ್ತು ಕೃಷ್ಣ ಶೆಟ್ಟರು ವಸ್ತುಸ್ಥಿತಿಯ ನೈಜತೆಯನ್ನು ತೆರೆದು ತೋರುವ ಪ್ರತೀಕಗಳಾಗಿದ್ದಾರೆ. "ವಿನೋದದ ಪರಮಾವಧಿ" ಬೇಜವಾಬ್ದಾರಿಯ ನಡೆ ನುಡಿಗಳ ಪರಿಣಾಮಗಳನ್ನು ಸಂಕೇತಿಸುತ್ತದೆ. "ಒಬ್ಬ ಸ್ವಾಮಿಗಳ ಕಥೆ"ಯಲ್ಲಿ ವ್ಯಕ್ತಿ ಯಾವ ವೇಷದಲ್ಲಿದ್ದರೂ ಪ್ರಕೃತಿ ಸಹಜವಾದ ಕುತೂಹಲಗಳಿಗೆ ಸೋಲುತ್ತಾನೆ ಎಂಬುದರ ಚಿತ್ರಣವಿದ್ದರೆ, "ಒಂದು ಅ-ನೀತಿ" ಕಥೆಯಲ್ಲಿ ಐದಾರು ದಶಕಗಳ ಹಿಂದೆ ನಮ್ಮಲ್ಲಿ ನಡೆದಿರಬಹುದಾದ ಮತಾಂತರದ ಹಾವಳಿಯ ಕಡೆಗೆ ಬೆಳಕು ಚೆಲ್ಲುತ್ತದೆ. "ವಾಕಿಂಗ್ ಸ್ಟಿಕ್" ಆಡಳಿತದ ಕೆಲ ವೈಖರಿಯ ಕುರಿತ ವಿಡಂಬನೆಯಾಗಿದೆ, "ಕನಸು" ಮುಗ್ಧೆಯೊಬ್ಬಳ ಸರಳ ಮನಃಸ್ಥಿತಿಯ ತುಮುಲವನ್ನು ಚಿತ್ರಿಸುತ್ತದೆ. "ನಿರುದ್ಯೋಗಿ", "ಪಿಶಾಚಿಯ ತವರುಮನೆ" ಮುಂತಾದವೂ ಓದುಗರ ಮನ ಸೆಳೆಯುತ್ತವೆ.

ಸರಳ ಮತ್ತು ಸ್ನೇಹಜೀವಿಯಾದ ಪಾ. ವೆಂ. ರವರ ರಸಾರ್ದ್ರ ಲೇಖನಿಯಿಂದ ಹರಿದು ಬಂದ ಸಾಹಿತ್ಯ ಸಂಪತ್ತನ್ನು ಸಂಗ್ರಹಿಸಿ ಇಡುವ ಪ್ರವೃತ್ತಿ ಸರ್ವಥಾ ಸ್ತುತ್ಯವಾಗಿದೆ. ಹಾಗೂ ಸರ್ವರ ಪ್ರೋತ್ಸಾಹಕ್ಕೆ ಅರ್ಹ ಆಗಿದೆ. ಈ ಸಂಕಲನ ವಾಚನೀಯವೂ ಸಂಗ್ರಹಣೀಯವೂ ಆಗಿದೆ.

ಉಡುಪಿ
4-2-2002

ಬನ್ನಂಜೆ ರಾಮಾಚಾರ್ಯ

# ಪರಿವಿಡಿ

# ೧. ಕರುಳಿನ ಮರುಳು

.................

"ಅಮ್ಮಾ...."

".........ಏಕೆ ಮಗು? ....... ಇನ್ನೂ ನಿದ್ದೆ ಬಂದಿಲ್ಲವೆ?........"

"..........ಇಲ್ಲ ಅಮ್ಮ........"

ತಿಂಗಳಿರುಳಿನ ಪ್ರಶಾಂತವಾದ ಸರೋವರದಲ್ಲಿ ಕಿರಿದಾದೊಂದು ಕಲ್ಲನ್ನೆಸೆದ ಹಾಗೆ ನೀರವದ ಆ ರಾತ್ರಿಯಲ್ಲಿ ಆ ಮಾತುಗಳು ತರಂಗಿತವಾದುವು.

ಕೊಂಚ ಹೊತ್ತು ಮೌನ ............

".........ಅಮ್ಮಾ!"

"ಏಕೆ ಮಗು?"

"ನೀನು ಅಳುತ್ತಿರುವುದೇಕಮ್ಮ?"

".......... ಎಲ್ಲಿ ಮಗು?"

"ಆಗಿಂದ ನೀನು ಮೌನವಾಗಿ ಅಳುತ್ತಿರುವೆಯಲ್ಲ?"

"ಇಲ್ಲ ಮಗು!.........."

"ನೀನು ಸುಳ್ಳೆ ಹೇಳುತ್ತಿ. ಆಗಿಂದ ನನಗೆ ನಿದ್ದೆ ಬಂದಿದೆಯೆಂದು ತಿಳಿದು ಅಳುತ್ತಿದ್ದಿ.... ಏಕಮ್ಮಾ ಅಳುವುದು....?"

ಕಟ್ಟು ಹರಿದು ಹೋಯಿತು. ಕಣ್ಣೀರು ಕೋಡಿ ಹರಿಯಿತು. ಕರುಳಿನ ಚೂರನ್ನು ಒಡಲಿಗೆ ಒತ್ತಿಕೊಂಡಳು.



ಪಾ. ವೆಂ. ಆಚಾರ್ಯ

ಏಕೆಂದರಿಯದೆ ಹುಡುಗನೂ ಅತ್ತನು... ಕಾಳಿಂದಿಯ ಪ್ರವಾಹಕ್ಕೆ
ತೋಡೊಂದು ಬಂದು ಸೇರಿದ ಹಾಗಾಯಿತು.

..............

" .........ಹೀಗೇಕೆ ನಿದ್ದೆ ಮಾಡದೆ ಅಳುತ್ತಿರುವುದಮ್ಮ.....ನನ್ನ ಕೂ
ಹೇಳಲಾಗದೆ?"

"ಯಾಕೂ ಇಲ್ಲ ಮಗು!...."

"ಹೇಳುವುದಿಲ್ಲವೆ ಅಮ್ಮ....?"

"ಬೇಡ ಮಗು! ನಿನಗೆ ತಿಳಿಯದು. ಈ ಮೊಗ್ಗಿನ ಬಳಿ ಸುಮ್ಮ
ಉರಿಯನ್ನೇಕೆ ಉರಿಸಲಿ?"

ಹುಡುಗನಿಗೆ ಅರ್ಥವಾಗಲಿಲ್ಲ.....

"ಯಾಕೆ ಅಳುತ್ತಿರುವೆ, ಹೇಳಮ್ಮ!"

"ಯಾಕೆನ್ನಲಿ ಮಗು?........."

ಗುಡುಗಿಲ್ಲ, ಮಿಂಚಿಲ್ಲ, ಮೋಡವು ಧಾರಾಕಾರವಾಗಿ ಮಳೆ ಸುರಿಸಿತು
ಒಂದೊಂದು ಹನಿಗೂ ಆ ಹುಡುಗನ ಎದೆಯ ಬೇಗುದಿ ಹೆಚ್ಚುತ್ತಿತ್ತು.

"ನನ್ನ ಕೂಡೆ ಹೇಳಬಾರದೆ ಅಮ್ಮ....?"

"..........ಈ ಬಡತನದಲ್ಲಿ ನಮ್ಮನ್ನು ಬಿಟ್ಟು ನಿನ್ನ ಅಪ್ಪ ಹೋದರಲ್ಲ
ಎಂದು ಅಳುತ್ತಿದ್ದೇನೆ, ಅಷ್ಟೆ.... ನನ್ನ ಕರುಳಿನ ಕೂಸಿಗೆ ಒಂದು ಹಿಡಿ ಅನ್ನವನ್ನು
ಇಕ್ಕಬೇಕಾದರೆ ನನ್ನ ಕೂಡೆ ಅನುಕೂಲವಿಲ್ಲ..."

"ಇಲ್ಲ ಅಮ್ಮ.... ನನಗೆ ಅರೆಹೊಟ್ಟೆಯಾದದ್ದಿಲ್ಲ.... ನಾನು ನಿನ್ನನ್ನು
ಕಾಡಿದ್ದುಂಟೆ?...."

"ಇಲ್ಲ ಮಗು, ನೀನು ಕಾಡಿದ್ದಿಲ್ಲ, ನಿನ್ನಂಥ ಮಗುವನ್ನು ಹೊಟ್ಟೆ ತುಂ
ಉಣಿಸುವ ಭಾಗ್ಯವಿಲ್ಲದೆ ಹೋಯಿತಲ್ಲ... ನಿನ್ನ ಅಪ್ಪ ಹತ್ತಾರು ಸಾವಿ
ಸಂಪಾದಿಸಿದ್ದರು.... ನನ್ನ ಭಾಗ್ಯಕ್ಕೆ ಒಂದು ಚಿಕ್ಕಾಸು ಬಿಟ್ಟು ಹೋಗಲಿಲ್ಲ..."

"ಅಷ್ಟೆಲ್ಲ ಹಣವನ್ನೇನು ಮಾಡಿದನಮ್ಮ...?"

"ಏನು ಮಾಡಿದನೆನ್ನಲಿ?...... ಎಲ್ಲ ಆ ವಿನೋದಾಸಾನಿಯು ದೋಚಿಕೊಂಡಳು.....ಹೀಗೆ ನಮ್ಮನ್ನು ಗತಿಗೆಡಿಸಿ ಹೋದರು..... ಸತ್ತವರಿಗೇನು ಇದ್ದವರ ಸುಖದುಃಖ?"

"ಎಲ್ಲ ಹಣವನ್ನು ಆಕೆ ಕದ್ದುಕೊಂಡು ಹೋದಳೆ?........"

"ಇಲ್ಲ ಮಗು......ಕದ್ದುಕೊಂಡು ಹೋಗಿದ್ದರೆ ನನಗೆ ದುಃಖವಿರಲಿಲ್ಲ...... ನಿನ್ನಪ್ಪನೇ ಎಲ್ಲವನ್ನವಳಿಗೆ ಕೊಟ್ಟರು...."

"ಅವಳಿಗೆ ಕೊಟ್ಟದ್ದು ಯಾಕಮ್ಮಾ....?"

"ಅಯ್ಯೋ! ಮಗು.... ಯಾಕೆನ್ನಲಿ?..... ಅವಳು ಸೂಳೆ... ಅವಳಿಗೆ ಮೋಹಿಸಿ ನಿನ್ನಪ್ಪ ಎಲ್ಲವನ್ನು ಅವಳಿಗೆ ಕೊಟ್ಟರು.... ನಿನ್ನಪ್ಪನಿಗೆ ನಾನೊಬ್ಬಳೆ ಸಾಲದೆ ಸೂಳೆಯನ್ನಿಟ್ಟುಕೊಂಡಿದ್ದರು."

ಹುಡುಗನಿಗೆ ಅರ್ಥವಾಗಲಿಲ್ಲ... ಆದರೆ ಆಕೆಯ ಕರುಳಲ್ಲಿ ಏಳುತ್ತಿದ್ದ ದುಃಖದ ಸ್ವರಗಳು ಆತನ ಕರುಳಲ್ಲಿ ಪ್ರತಿಧ್ವನಿತವಾಗುತ್ತಿದ್ದುವು. ಆದರೆ ಆ ಸ್ವರವು ಅವ್ಯಕ್ತ.... ಮುಚ್ಚಂಜೆಯ ಹಾಗೆ ಮಸುಕು ಮಸುಕು... ತಿರುಗಿ ವಿಷಾದಮಯ!

......................

"ಮಗು....." ಕರುಳು ಮೃದುವಾಗಿ ಝುಂಕರಿಸಿತು.

"ಯಾಕೆ ಅಮ್ಮ?" ಕರುಳಿನ ತುಂಡು ಪ್ರತಿ ಝುಂಕರಿಸಿತು.

"ನೀನು ನಿನ್ನಪ್ಪನ ಹಾಗೆ ಸೂಳೆಗಾರಿಕೆ ಮಾಡಿ.... ಎಲ್ಲಿಯಾದರೂ ನಿನ್ನ ಹೆಂಡತಿಯನ್ನು ದುಃಖಗೊಳಿಸಬೇಡ....." ಕರುಳಿನ ಮರುಳು ಹಿಂದು ಮುಂದೆ ನೋಡದೆ ನುಡಿಸಿತು.

"ಇಲ್ಲಮ್ಮ."

"ಹೆಂಡತಿಯನ್ನು ಬಿಟ್ಟು ಬೇರೊಬ್ಬಳ ಸಂಗ ಮಾಡೆನೆಂದು ನನ್ನಾಣೆ ಹಾಕಿ ನುಡಿ...."

"ನಿನ್ನಾಣೆಯಾಗಿ ನಾನು ಬೇರೊಬ್ಬಳ ಸಂಗ ಮಾಡೆನು!"

ಹುಚ್ಚು ಹೃದಯವು ಅರಿಯದ ಹುಡುಗನಿಂದ ಪ್ರತಿಜ್ಞೆ ಮಾಡಿಸಿತು.

▲▲▲

ಹನ್ನೆರಡು ಮಧುಮಾಸಗಳು ಆಗಸವನ್ನು ತೊಳೆದವು. ಮಾತೆಯ ಮೋಹ
ಮಡಿಲಲ್ಲಿ ಪವಡಿಸಿ ಆಕೆಯ ಕಣ್ಣೀರ ಹೊನಲ ತಡಿಯಲ್ಲಿ ಪ್ರತಿಜ್ಞೆ ಮಾಡಿದ
ಹುಡುಗ ಕಾಲೇಜಿನಲ್ಲಿ ವ್ಯಾಸಂಗ ಮಾಡುತ್ತಿದ್ದಾನೆ. ಅವನ ... ಶಕ್ತಿಯ
ಅಧ್ಯಾಪಕರೆಲ್ಲರ ಮನವನ್ನು ಸೆಳೆದು ಆತನನ್ನು ಕಾಲೇಜಿನ ಮೆಟ್ಟಲೇ... ತು
ಕಾಲೇಜಿನ ವ್ಯಾಸಂಗದಿಂದ ತಾಯಿಯ ಸ್ನೇಹಮಯವಾದ ಸಹವಾಸಕ್ಕೆ ಚಿರಕಾ...
ತೊಡಕುಂಟಾಯಿತು.

▲▲▲

ಆತ ಕಿಟಕಿಯ ಬಾಗಿಲನ್ನು ತೆರೆದ.....

ನಾಲ್ಕು ಕಣ್ಣುಗಳು ಒಂದೆಡೆ ಸೇರಿದುವು.

ದೂರದಲ್ಲಿ ಪ್ರಭಾತ ದಿಗಂತದಲ್ಲಿ ಅರುಣರಾಗವು ಕಳೆಯೇರುತ್ತಿತ್ತು...
ಅವರ ಕಪೋಲಗಳಲ್ಲಿ ಅದೇ ರಾಗವು ಕ್ಷಣಕಾಲ ಪ್ರತಿಬಿಂಬಿತವಾದಂತೆ ತೋರಿತು
ಎರಡೂ ಮೊಗಗಳು ಜೋತುವು.....

"ಸರಳಾ!.... ಏ ಸರಳಾ!"

"ಬಂದೆನಮ್ಮ...."

ಅವನು ತಲೆಯೆತ್ತಿ ನೋಡಿದ : ಆಕೆಯ ಮೂರ್ತಿಯು ತಿರುತಿರು...
ನೋಡುತ್ತ ತಾಯ ಕಡೆಗೆ ಹೊರಟುಹೋಗುತ್ತಿತ್ತು.

▲▲▲

ಅಮೃತಮಯವಾದ ಬೆಳ್ದಿಂಗಳು ಶ್ಯಾಮಲ ಗಗನದಲ್ಲಿ ಹಿಡಿಸಲಾರ...
ಹೊರ ಸೂಸುತ್ತಿತ್ತು. ಆ ಹೂದೋಟದಲ್ಲಿ ವಿವಿಧ ಕುಸುಮಗಳರ...
ನಳನಳಿಸುತ್ತಿದ್ದುವು. ಮಾರುತನ ಮೃದುಲ ಸ್ಪರ್ಶದಿಂದ ತರು-ಲತೆಗಳ...
ದರವಿಪ್ಲವವಾಗಿದ್ದುವು. ಅದೇ ಉದ್ಯಾನದ ಮಾಮರದ ನೆಳಲಲ್ಲಿ ಅಪ್ಪಿ...
ಬಿಗಿಯಲ್ಲಿ ಪ್ರೇಮರವ ವ್ಯಕ್ತಿಗಳಾರು...?

... ಪ್ರತಿಜ್ಞೆಯಾಗಿ ಹನ್ನೆರಡು ವರುಷಗಳು ಕಳೆದು ಹೋಗಿದ್ದುವು!.....

▲▲▲

" ........ ಪರೀಕ್ಷೆಯಾದ ಮೇಲೂ ಒಂದು ದಿನ ಸುಮ್ಮನೆ ನಾನೇಕೆ ಇಲ್ಲಿ ಉಳಿದುಕೊಂಡೆ... ಹಾಸ್ಟೆಲಲ್ಲಿ ವ್ಯಾಸಂಗಕ್ಕೆ ಅನನುಕೂಲವೆಂದಲ್ಲ ಈ 'ಲಾಜ'ನಲ್ಲಿ ಉಳಿದುಕೊಂಡುದು... ಇಲ್ಲಿ ಹೊಸ ವ್ಯಾಸಂಗವಾಗುವುದೆಂದು ಯಾರಿಗೆ ಗೊತ್ತು...... ಹೈಸ್ಕೂಲಿಗೆ ಸೇರಿದಂದಿನಿಂದ ಎಷ್ಟೊಂದು ಬಾರಿ ಹೃದಯವನ್ನು ಮಿದಿದು ಇಂತಹ ಸಂದರ್ಭಗಳಿಂದ ಪಾರಾಗಿದ್ದೆ!.... ಆದರೆ ಹದಿಮೂರು ವರುಷಗಳವರೆಗೆ ಮಾಡಿದ ಸಾಧನೆಯು --- ಅಯ್ಯೋ ದುರ್ಬಲ ಹೃದಯವೆ!.... ಅಂದು ಮಾತೆಯ ಕಣ್ಣೀರಿನ..... ಬಿಸುಸುಯ್ಲಿನ ಸಾಕ್ಷಿಯಾಗಿ ಮಾಡಿದ ಪ್ರತಿಜ್ಞೆ.... ಈ ಮೋಹನ ಮೂರ್ತಿಯು....ಈ ವಸಂತವು.... ಅದನ್ನು ಸೂರೆಗೊಂಡವಲ್ಲ!.... ಈ ಒಂದು ದಿನ ಹೃದಯವನ್ನು ಮಿದಿದಿದ್ದರೆ....?

..... ಅಂದು ಬೆಳಗ್ಗೆ ಕಿಟಕಿಯನ್ನು ತೆರೆದಾಗ... ಹೂಕೊಯ್ಯಲು ಬಂದ ಆಕೆಯ ದರ್ಶನವಾಯಿತು... ಹೃದಯವನ್ನು ಮಿದಿಯುವುದು ಆಗಲೇ ನನಗೆ ದುಸ್ಸಹವಾಯಿತು...... ಆದರೆ..... ಯಾವ ಪಾಪವು ನನ್ನನ್ನು ಆ ಕಡೆ ಎಳೆಯಿತೊ!.... ಒಂದೇ ಒಂದು ತಿಂಗಳೊಳಗೆ.... ಮಾತೆಯ ಕಣ್ಣೀರಿನ, ಬಿಸು ಸುಯ್ಲಿನ, ಸಾಕ್ಷಿಯಾಗಿ ಮಾಡಿದ ಪ್ರತಿಜ್ಞೆ... ಒಂದು ನಿಮಿಷದ ಸುಖಕ್ಕೆ... ಎರವಾಯಿತು..." ಬಾಹು ಬಂಧನವನ್ನು ಬಿಡಿಸಿಕೊಂಡು ತನ್ನ ಕೊಟ್ಟಡಿಯತ್ತ ತೆರಳುವಾಗ ಈ ಮೋಡಗಳು ಆತನ ಮನಸ್ಸನ್ನು ಕವಿದಿದ್ದುವು.

▲▲▲

ಮಾತೆಯ ಸಮ್ಮುಖದಲ್ಲಿ ತಲೆವಾಗಿ ನಿಂತಿದ್ದಾನೆ ಆತ :

"........ ಹನ್ನೆರಡು ವರುಷವಾಯಿತಮ್ಮ...... ನಿನ್ನ ಸಂತಪ್ತವಾದ ಉಡಿಯಲ್ಲಿ ಮುಖವನ್ನಿಟ್ಟು ಪ್ರತಿಜ್ಞೆ ಮಾಡಿ... ಇಂದಿನವರೆಗೆ ಆ ಪ್ರತಿಜ್ಞೆಯನ್ನು ಕಾದುಕೊಂಡು ಬಂದೆ..... ಅಂದಿನ ಆ ಎಂಟನೆ ವರುಷದ ಪ್ರತಿಜ್ಞೆಯ ಸಾಕ್ಷಿಯನ್ನು ಯಾವ ನನ್ನ ಹೃದಯವು ಹೇಳುತ್ತಿದೆಯೋ, ಅದೇ ಹೃದಯ ಇಂದು..... ಅದರ ಭಂಗದ ಸಾಕ್ಷಿಯನ್ನು ಹೇಳುತ್ತಿದೆ --- ಹದಿಮೂರು ವರುಷಗಳ ಮೇಲೆ....

ಮಾತೆಯ ಕಣ್ಣೀರ ಸಾಕ್ಷಿಯಾಗಿ ಮಾಡಿದ ಪ್ರತಿಜ್ಞೆಯನ್ನು ಕಾದುಕೊಳ್ಳಲಾರದ
ಹೋದೆ...."

ಆತನ ಕಣ್ಣಲ್ಲಿ ನೀರು ತುಂಬಿತು... ಹೃದಯವು ರುದ್ಧವಾಯಿತು.
ತರಂಗಗಳು ಒಂದೊಂದಾಗಿ ಬಂದು ದಡಕ್ಕೆ ಹೊಡೆಯುತ್ತಿದ್ದವು.

ಶಾರದ ಗಗನದಂತೆ ಶುಭ್ರವಾಗಿ ನಿಷ್ಕಲಂಕವಾಗಿದ್ದ ಹೃದಯದಿಂದ
ಅರಿಯದೆ ಪ್ರತಿಜ್ಞೆಯನ್ನು ಮಾಡಿದ್ದ ಎಂಟು ವರುಷದ ಹುಡುಗನ ಆ ಮುಖವನ್ನು
ಯಾವ ಸ್ನೇಹದಿಂದ ತನ್ನ ಉರಕ್ಕೆ ಒತ್ತಿಕೊಂಡು ಕಣ್ಣೀರು ಸುರಿಸಿದ್ದಳೋ,
ಹನ್ನೆರಡು ವರುಷಗಳ ಮೇಲೆ ಕಲಂಕಿತವಾದ ಹೃದಯದ ಭಾರವನ್ನು ಆಕೆಯ
ಮುಂದೆ ಇಳಿಸಿ ಕಣ್ಣೀರು ತುಂಬಿ ನಿಂತಿದ್ದ ಇಪ್ಪತ್ತು ವರ್ಷದ ಮಗನ ಅದೇ
ಮುಖವನ್ನು... ಅದೇ ಕ್ಷಮಾಮಯವಾದ ಸ್ನೇಹದಿಂದ ಬರಸೆಳೆದು ಹೃದಯಕ್ಕೆ
ಆತುಕೊಂಡು ಕಣ್ಣೀರು ಸುರಿಸಿದಳು ಆ ಮಾತೆ.

ಮಾತೆಯ ಸ್ನೇಹಮಯವಾದ ಹೃದಯವು ಯಾವುದನ್ನು ತಾನೇ
ಕ್ಷಮಿಸದಿರುವುದು?

ಬೀಸಿದ ಗಾಳಿಯ ತೀಟಕ್ಕೆ ದಡಕ್ಕೆ ಹೋಗಿ ಬಿದ್ದ ತೆರೆಯನ್ನು ಸಮುದ್ರವು
ತನ್ನೊಳಗೆ ಬರಮಾಡಿಕೊಳ್ಳದೇನು ಮಾಡಬಲ್ಲುದು?

❑

# ೨. ಅಪರ ಜೀವನ

ನಾನು ಸತ್ತದ್ದು ೧೩ನೇ ಆಗಸ್ಟ್ ೧೯೩೧ರಲ್ಲಿ. ನನ್ನ ಜೀವನದಲ್ಲಿ ೧೩ನೆಯ ತಾರೀಕೆಂದರೆ ಬಹಳ ಮಹತ್ವದ್ದಾಗಿತ್ತು. ನಾನು ಹುಟ್ಟಿದ್ದು ಸಪ್ಟೆಂಬರ ಹದಿಮೂರರಲ್ಲಿ. ನನಗೆ ಮದುವೆಯಾದದ್ದು ನವಂಬರ್ ಹದಿಮೂರರಲ್ಲಿ. ನನ್ನ ಹೆಂಡತಿ ಸತ್ತದ್ದು ಜನವರಿ ಹದಿಮೂರರಲ್ಲಿ.

ಸಾಯುವಾಗ ನನಗೆ ಮುವ್ವತ್ತೆಂಟು ವರ್ಷ ವಯಸ್ಸು. ಆದರೆ ಜೀವನದ ಆಶೆ-ಅಭಿಲಾಷೆಗಳು ಇನ್ನೂ ತೀರಿದ್ದಿಲ್ಲ. ಹೆಂಡತಿ ಸತ್ತು ಒಂದು ವರುಷವಾಗಿತ್ತಷ್ಟೆ. ಇನ್ನೊಂದು ಮದುವೆಯ ಯೋಚನೆಯಲ್ಲಿದ್ದೆ. ಆಗ ನನಗೆ ಕಾಯಿಲೆ ಬಂತು.

ಮನೆಯಲ್ಲಿ ಬೇರೆ ಯಾರೂ ಇಲ್ಲದೇ ಇದ್ದದ್ದರಿಂದ ನನ್ನ ದೊಡ್ಡಪ್ಪನ ಮನೆಗೆ ಹೋಗಿ ಬೀಳಬೇಕಾಯಿತು. ಹೆಸರಿಗೇನೋ ಅವರು ನನ್ನ ಔಷಧ ಉಪಚಾರಗಳನ್ನು ಬಹಳ ಆದರದಿಂದ ಮಾಡುತ್ತಿದ್ದರು. ಆದರೆ ನಾನು ಬದುಕಬೇಕೆಂದು ಅವರಿಗೆ ಎಳ್ಳಷ್ಟೂ ಇಚ್ಛೆಯಿದ್ದಿಲ್ಲ. ಒಳಗೊಳಗೆ ಅವರು ಮಾತಾಡುತ್ತಿದ್ದುದನ್ನು ನಿದ್ರೆಯ ನಟನೆಯಿಂದ ನಾನು ಕೇಳುತ್ತಿದ್ದೆ. ನನ್ನ ಸಾವನ್ನು ನನ್ನ ದೊಡ್ಡಪ್ಪನ ಮಗನು ಹಾರೈಸಲು ಕಾರಣವಿತ್ತು. ಏಕೆಂದರೆ ನನಗೆ ೧೦,೦೦೦ ರೂಪಾಯಿಯ ವಿಮೆಯಿತ್ತು. ನಾನು ಸತ್ತಲ್ಲಿ ನಿಸ್ಸಂತತಿಯಾದ ನನ್ನ ಈ ಹಣವು ಆತನಿಗೆ ಸಿಕ್ಕುವುದು ನಿಶ್ಚಯವಾಗಿತ್ತು.

ಏನು ಮಾಡಲಿ? ಇಷ್ಟೆಲ್ಲಾ ತಿಳಿದೂ ನಾನು ಅವರಲ್ಲಿಯೇ ಬಿದ್ದಿರಬೇಕಾಗಿತ್ತು. ನನಗೆ ಬೇರೆ ಗತಿ ಇರಲಿಲ್ಲ.

ಪಾ. ವೆಂ. ಆಚಾರ್ಯ

ನಾನು ಸತ್ತ ಸಮಯವು ನನಗೆ ಸರಿಯಾಗಿ ನೆನಪಿದೆ. ಮೂರು ಸಂಜೆಯ ಮಬ್ಬು ಅರ್ಧಮರ್ಧ ಕವಿದಿತ್ತು. ನನ್ನ ಅಂಗಾಂಗಗಳಲ್ಲಿ ನಿಶ್ಚೇತನದ ಕೋಡ ಪ್ರವಾಹವು ಹರಿದಿತ್ತು. ಡಾಕ್ಟರರು ಬಂದು ನೋಡಿದ್ದೂ ಆಯಿತು ನಿಷ್ಪ್ರಯೋಜಕವೆಂದು ಅವರ ಇತ್ಯರ್ಥವೂ ಆಯಿತು. ನನ್ನ ನಾಲಗ ಅಲ್ಲಾಡುತ್ತಿರ್ದಿಲ್ಲ. ಕಿವಿ ಚೆನ್ನಾಗಿ ಕೇಳುತ್ತಿದ್ದಿಲ್ಲ. ಕಣ್ಣು ಎವೆ ಮುಚ್ಚಲೂ ಸಾ ಶಕ್ತಿಯಿಲ್ಲದೆ ಹಾಗೆಯೇ ತೆರೆದಿದ್ದೆ. ಡಾಕ್ಟರರ ಇತ್ಯರ್ಥವನ್ನು ತಿಳಿದು ನನ್ನ ದೊಡ್ಡಪ್ಪನ ಮಗ ಒಳಗೆ ಬಂದಾಗ ಅವನ ಮುಖ ಅರಳಿತ್ತು. ನನ್ನಲ್ಲಿ ಶಕ್ತಿ ಇರುತ್ತಿದ್ದರೆ ಆಗಲೇ ಆತನ ಕೊರಳು ಹಿಸುಕಿ ಬಿಡುತ್ತಿದ್ದೆ.

ನನ್ನ ಪ್ರಾಣವು ಕೊಂಚ ಕೊಂಚವಾಗಿ ಹೊರಟು ಹೋಗುತ್ತಿದ್ದ ಅ ಅನುಭವವನ್ನು ನೆನೆದರೆ ಈಗಲೂ ಮೈ ಜುಂ ಎನ್ನುತ್ತದೆ.



ಹೀಗೆಷ್ಟು ದಿನ ಸತ್ತಿದ್ದೆನೋ ನನಗೇನೂ ತಿಳಿದಿದ್ದಿಲ್ಲ.

ಸತ್ತಮೇಲಿನ ನನ್ನ ಮೊದಲನೆಯ ನೆನಪೆಂದರೆ ಹಂಪನಕಟ್ಟೆಯಲ್ಲಿ ನಾನು ನಡೆಯುತ್ತಿದ್ದುದು. ನಾನು ಸತ್ತು ಬಹಳ ದಿವಸಗಳಾಗಿರಬೇಕೆಂದು ನನಗೆನಿಸಿತು. ನನ್ನ ಹಿಂದಿನ ನೆನಪು ಸರಿಯಾಗಿದ್ದಲ್ಲಿ ನಾನು ಸತ್ತಾಗ ಹಂಪನಕಟ್ಟೆ ಇಷ್ಟೊಂದು ಪ್ರಾಮುಖ್ಯ ಸ್ಥಳವಾಗಿದ್ದಿಲ್ಲ. ಇದೇನು ಚೋದ್ಯವೆಂದು ಆಶ್ಚರ್ಯಪಡುತ್ತಾ ನಾನು ಹಂಪನಕಟ್ಟೆ ಬಸ್ ಸ್ಟೇಂಡಿನ ಹತ್ತಿರ ಬಂದೆ. ಹಿಂದೆ ಅಲ್ಲಿ ಇಲ್ಲದಿದ್ದ ಕಟ್ಟೋಣಗಳು, ಜನಸಂದಣಿ ಕಣ್ಣಿಗೆ ಬಿತ್ತು. ಎಲ್ಲಕ್ಕಿಂತ ಹೆಚ್ಚು ನನ್ನ ಮನಸ್ಸನ್ನಾಕರ್ಷಿಸಿದ್ದು ಶ್ರೀಕೃಷ್ಣ ಭವನದ ಭವ್ಯವಾದ ಕಟ್ಟಡ. ಸೀದಾ ಒಳಗೆ ನಡೆದು ಒಂದು ಮೇಜಿನ ಬಳಿ ಕುಳಿತೆ. ಮಧ್ಯಾಹ್ನದ ಹೊತ್ತಾಗಿತ್ತು. ಬಹಳ ಬಾಯಾರಿಕೆಯೂ ಆಗಿತ್ತು. ಸರ್ವರ್ ಬಂದು ಕೇಳಿದ - "ಏನು ತರಲಿ?" ಲೆಮನ್ ಕ್ರಶ್ ಮತ್ತು ಫ್ರುಟ್ ಸಾಲದ್ ತೆಗೆದುಕೊಂಡೆ. ಅದನ್ನು ಮುಗಿಸಿದಾಗ ಬಿಲ್ ಬಂತು. ನೋಡಿದೆ - ತಾರೀಕು ೧೩ -೮-೧೯೩೭.

ನಾನು ಸತ್ತು ಆರು ವರ್ಷಗಳಾಗಿತ್ತು! ಮೆಲ್ಲ ಮೆಲ್ಲನೆ ಹಳೆಯ ನೆನಪುಗಳೆಲ್ಲವೂ ಒಂದೊಂದಾಗಿ ನನ್ನ ತಲೆಯನ್ನು ತುಂಬಿಕೊಂಡವು. ನನ್ನ

ದೊಡ್ಡಪ್ಪನ ಮಗ - ನಾನು ಸಾಯುವಾಗ ಆತನಿಗಾದ ಸಂತೋಷ ನನಗೆ ಆಗ ಆದ ಅನುಭವ.

ಈ ಕಹಿ ನೆನಪುಗಳೊಡನೆ ದ್ವೇಷವೂ ನನ್ನೆದೆಯಲ್ಲಿ ಪ್ರಜ್ವಲಿಸಹತ್ತಿತು. ಸಾಧ್ಯವಾದರೆ ಅವನನ್ನು ಕೊಂದು ಬಿಡಬೇಕೆನಿಸಿತು. ಹೋಟೆಲಿನವನಿಗೆ ಹಣವನ್ನು ಕೊಟ್ಟು ನೆಟ್ಟಗೆ ಹೂ ಮಾರ್ಕೆಟಿನ ದಾರಿ ಹಿಡಿದೆ. ನನ್ನ ದಾಯಾದಿ ಇದ್ದದ್ದು ಅಲ್ಲಿಯೇ.

ಅವನಿದ್ದ ಮನೆಗೆ ಹೋದೆ. ಅದರ ಕೆಲವು ಭಾಗಗಳನ್ನು ತೆಗೆದು ಪುನಃ ಕಟ್ಟಿದ್ದರು. ಹೋಗಿ ಬಾಗಿಲು ತಟ್ಟಿದೆ. ನನಗೆ ಗುರುತಿಲ್ಲದಾಕೆಯೊಬ್ಬಳು ಬಾಗಿಲು ತೆರೆದಳು.

"ಶ್ರೀನಿವಾಸ ಶಾಸ್ತ್ರಿಗಳು ಇದ್ದಾರೆಯೆ?" ನಾನು ಕೇಳಿದೆ.

"ಇದು ಶ್ರೀನಿವಾಸ ಶಾಸ್ತ್ರಿಗಳ ಮನೆಯಲ್ಲ -ಹಾಂ. ಆ ಹೆಸರಿನವರೊಬ್ಬರು ಇಲ್ಲಿ ಇದ್ದರು. ಈಗ ಅವರು ಈ ಮನೆಯನ್ನು ಮಾರಿ ಪೆಂಟ್ಯುಲಂಡ್ ಪೇಟೆಯಲ್ಲಿ ಹೊಸ ಮನೆಯನ್ನು ಕಟ್ಟಿಕೊಂಡಿದ್ದಾರೆ."

ಸರಿ. ಪೆಂಟ್ಯುಲೆಂಡ್ ಎಕ್ಸ್‌ಟೆನ್ಶನಿನ ದಾರಿ ಹಿಡಿದೆ.

ಸಿಕ್ಕಿದವರೊಡನೆ ಕೇಳಿ ಕೇಳಿ ಶ್ರೀನಿವಾಸ ಶಾಸ್ತ್ರಿ(ನನ್ನ ದಾಯಾದಿ)ಯ ಮನೆಯನ್ನು ಗೊತ್ತುಮಾಡಿಕೊಂಡೆ. ದೊಡ್ಡ ಬಂಗಲೆ ಅದು. ನನ್ನ ವೈರ ಮತ್ತಷ್ಟು ಹೆಚ್ಚಿತು. ನನ್ನ ವಿಮೆಯ ಹಣದಿಂದ ಈತ ಇಷ್ಟು ಸುಖ ಪಡೆಯುತ್ತಾ ಇದ್ದಾನೆ!

ಅಷ್ಟು ಹೊತ್ತಿಗೆ ಎರಡು ಗಂಟೆಯಾಗಿತ್ತು. ದರ್ಪದಿಂದ ಶ್ರೀನಿವಾಸನ ಬಂಗಲೆಯ ಪೋರ್ಟಿಕೋದ ಮೇಲೆ ಹೋದೆ. ಯಾರೂ ಇರಲಿಲ್ಲ, ನಡುಮನೆಯ ಬಾಗಿಲು ತಟ್ಟಿದೆ, ಒಬ್ಬಳು ಕೆಲಸದಾಕೆ ಬಾಗಿಲು ತೆರೆದಳು.

"ಶ್ರೀನಿವಾಸ ಶಾಸ್ತ್ರಿ ಇದ್ದಾನೆಯೇ?" ದರ್ಪದಿಂದ ನಾನು ಕೇಳಿದೆ.

"ಇದ್ದಾರೆ, ಅವರಿಗೆ ಸ್ವಲ್ಪ ಸೀಕು. ಉಪ್ಪರಿಗೆಯಲ್ಲಿ ತನ್ನ ಕೋಣೆಯಲ್ಲಿ ಮಲಗಿದ್ದಾರೆ."

"ಮನೆಯಲ್ಲಿ ಮತ್ತೆ ಯಾರೂ ಇಲ್ಲವೆ?"

"ಇಲ್ಲ; ಅಮ್ಮ ರಾಜಾ ಶಾಸ್ತ್ರಿಗಳಲ್ಲಿಗೆ ಉಪನಯನಕ್ಕೆ ಹೋಗಿದ್ದಾರೆ."

"ಶ್ರೀನಿವಾಸನಿಗೆ ಹೇಳು. ನಿನ್ನ ಹಳೇ ಸಂಬಂಧಿಕರೊಬ್ಬರು ಮದ್ರಾಸಿನಿಂದ ಬಂದಿದ್ದಾರೆ. ಒಳಗೆ ಬರಬಹುದೇ ಎಂತ."

ಹುಡುಗಿ ಹೆದರಿ ಹೆದರಿ ಉಪ್ಪರಿಗೆಯ ಮೇಲೆ ಹೋದಳು. ನಾನು ಸುತ್ತಲೂ ನೋಡಿ, ನನ್ನ ಪೆಟ್ಟಿಗೆ, ನನ್ನ ಟ್ರಂಕು, ನನ್ನ ಮೇಜು, ನನ್ನ ಕುರ್ಚಿಗಳು! ಹಗೆ ಮತ್ತಷ್ಟು ಏರಿತು.

ಹುಡುಗಿ ಕೆಳಗೆ ಬಂದು ಬರಬಹುದೆಂದಳು. ನಾನು ಉಪ್ಪರಿಗೆಯ ಮೇಲೇರಿದೆ. ಆಕೆ ಬಾಗಿಲು ಮುಚ್ಚಿ ಮನೆಯ ಹಿಂದುಗಡೆ ಹೊರಟು ಹೋದಳು.

ಶ್ರೀನಿವಾಸ ಪಲಂಗದ ಮೇಲೆ ಮಲಗಿದ್ದ; ನಾನು ಬಾಗಿಲು ದೂಡಿಕೊಂಡು ಒಳಗೆ ಹೋದೆ. ನಾನು ಒಳಗೆ ಬಂದೊಡನೆಯೇ ನನ್ನನ್ನೇ ನೋಡಿದ. ನಾನು ದ್ವೇಷ ಬೆರೆತ ಹುಸಿನಗೆಯೊಡನೆ -

"ಏನು ಶ್ರೀನಿವಾಸ, ಗುರುತು ಸಿಗುವುದಿಲ್ಲವೆ?" ಎಂದೆ.

"ಹಾಂ...ಹ...ಹ..ಹ.. ಎಲ್ಲಿಯೋ ಇದ್ದಾಂ... ನೋಡಿದ ನೆನಪಾಗುತ್ತದೆ." ಎಂದ ತನ್ನ ಸಹಜವಾದ ದೇಶಾವರದ ನಗೆಯಿಂದ.

"ನೀನು ಇಲ್ಲಿಗೆ ಬಂದು ಎಷ್ಟು ದಿನವಾಯಿತು?"

"ಇಾಂ... ಗ್ಞಾಪಕವಿರಲ್ಲಿ"

ನಾನು ಕಣ್ಣು ಕೆಂಪೇರಿಸಿ ಹೇಳಿದೆ -

"ನಾನು ಸತ್ತು ಇನ್ಶೂರೆನ್ಸಿನ ಹಣ ಸಿಕ್ಕಿದ ಕೂಡಲೆ, ಅಲ್ಲವೆ?"

ಶ್ರೀನಿವಾಸ ಬೆಚ್ಚಿಬಿದ್ದು ಎದ್ದು ಕುಳಿತ.

"ಯಾರು ಸ್ವಾಮಿ ನೀವು? ಯಾರು ಸತ್ತದ್ದು?-- ಏನು ಹೇಳುತ್ತಾ ಇದ್ದೀರಿ?..."

"ಮೂರ್ಖ! ಗುರುತು ಸಿಕ್ಕುವುದಿಲ್ಲವೇ? ನಾನು ನಿನ್ನ ದಾಯಾದಿ ಆತ್ಮಾರಾಮ ಶಾಸ್ತ್ರಿ! ನನ್ನ ಹಣದಿಂದ ಇಷ್ಟು ಬೊಜ್ಜು ಬೆಳೆದಿದೆ ನಿನಗೆ! ನಾನು ಸತ್ತದಿನವನ್ನು ನೆನೆ ---"

ಹೆಚ್ಚಿಗೆ ಮಾತಾಡದೆ ಒಂದೇ ಹಾರಿನಿಂದ ಅವನ ಕುತ್ತಿಗೆಯನ್ನು ಅವುಕಿ ಹಿಡಿದೆ. ಸ್ವರವೇ ಹೊರಡದಂತೆ ಹಿಡಿದೆ - ಸೇಡು ತೀರಿಸಿಕೊಂಡೆ.

▲▲▲

ಆಮೇಲೆ ನನಗೆ ಸೆಕೆ ವಿಪರೀತವಾದ ಹಾಗೆ ತೋರಿತು. ಕೋಟು ತೆಗೆದೆ. ಅರ್ಧಕೈಯ ಅಂಗಿಯು ಒಳಗಿತ್ತು. ಅದರಿಂದ ನನ್ನ ಅರ್ಧ ಕೈ ಕಾಣಿಸಿಕೊಂಡಿತು. ನನ್ನ ಕೈಯ ಹಾಗೆ ಕಾಣಿಸಲಿಲ್ಲ. ವಿಚಿತ್ರವೆನಿಸಿತು.

ಕೋಣೆಯಲ್ಲಿದ್ದ ನನ್ನ ಕನ್ನಡಿ ನೋಡಿಕೊಂಡೆ -

ನಾನು ನಾನಾಗಿರಲಿಲ್ಲ!

ಅದು ನನ್ನ ಮುಖವೂ ಅಲ್ಲ - ಮಾತ್ರವಲ್ಲ, ಅದು ನನ್ನ ವಯಸ್ಸೂ ಅಲ್ಲ. ನಾನು ಮುಂಚೆ ಅಷ್ಟು ಎತ್ತರವೂ ಇದ್ದಿಲ್ಲ. ದೊಡ್ಡ ಸಮಸ್ಯೆಯಾಯಿತು ನನಗೆ.

ಆದರೆ ಪರಿಸ್ಥಿತಿಯು ಆ ವಿಚಾರದಲ್ಲಿ ಹೆಚ್ಚು ತಲೆ ಕರಡು ಮಾಡಿಕೊಳ್ಳುವಷ್ಟು ಅವಕಾಶವನ್ನು ಕೊಡಲಿಲ್ಲ. ಶ್ರೀನಿವಾಸನ ಹೆಂಡತಿ ಎಷ್ಟು ಹೊತ್ತಿಗೂ ಹಿಂದೆ ಬರಬಹುದು. ಆದ್ದರಿಂದ ಪುನಃ ಕೋಟು ಹಾಕಿಕೊಂಡು ಬಾಗಿಲು ತೆರೆದು ಹೊರಟುಹೋದೆ. ಸಿಕ್ಕಿ ಬಿದ್ದರೆ ಬಹಳ ತೊಂದರೆಯಿದೆಯೆಂದು ನನಗೆ ಗೊತ್ತಿತ್ತು.

▲▲▲

ಬಿಸಿಲಿನಲ್ಲಿಯೇ ಹಿಂದೆ ನಡೆದೆ. ಹಂಪನಕಟ್ಟೆಗೆ ಮುಟ್ಟುವಷ್ಟಕ್ಕೆ ಹೊಟ್ಟೆ ಮಗುಚಿ ಬಂದಂತಾಯಿತು. ತಲೆ ತಿರುಗಿ ರಸ್ತೆಯ ಮೇಲೆ ಬಿದ್ದು ಬಿಟ್ಟೆ.

▲▲▲

ಪುನಃ ನನಗೆ ಎಚ್ಚರವಾದಾಗ ನಾನು ಸರಕಾರಿ ಆಸ್ಪತ್ರೆಯಲ್ಲಿದ್ದೆ. ನನಗೆ ಗುರುತಿಲ್ಲದಾಕೆಯೊಬ್ಬಳು ನನ್ನ ಬಳಿ ಕುಳಿತಿದ್ದಳು.

ಆಕೆ ಮಾತನಾಡುವ ರೀತಿಯಿಂದ ನಾನು ಅವಳ ಗಂಡನೆಂದು ನನಗೆ ತಿಳಿಯಿತು. ಆದರೆ ನಾನಾಕೆಯನ್ನು ನೋಡಿದ ನೆನಪಂತೂ ಇಲ್ಲವೇ ಇಲ್ಲ. ನಾನು ಮಾತನಾಡಿದ ರೀತಿಯಿಂದ ನನಗೆ ಹುಚ್ಚು ಹಿಡಿದಿದೆಯೆಂದು ನಿರ್ಧರಿಸಲಾಯಿತು.

ಆದರೆ ಎಲ್ಲಿಯ ಹುಚ್ಚು? ನಾನು ಆತ್ಮಾರಾಮ ಶಾಸ್ತ್ರಿ! ಆರು ವರ್ಷದ ಹಿಂದೆ ನನ್ನ ಸಾವಿನಿಂದ ಸಂತೋಷಗೊಂಡವನನ್ನು ಸಂಹರಿಸಿ ಬಂದಿದ್ದೇನೆ --

ಪಾ. ವೆಂ. ಆಚಾರ್ಯ

ಹಾಂ, ಸಂಹರಿಸಿ ಬಂದಿದ್ದೇನೆ. ಅದರ ನೆನಪು ನನಗೆ ಹೆದರಿಕೆಯನ್ನುಂಟು ಮಾಡಿತು. ಯಾರಿಗಾದರೂ ಗೊತ್ತಾಗಿ ನನ್ನನ್ನು ಪೋಲೀಸಿನವರು ಕಂಡು ಹಿಡಿದರೆ? ಯೋಚಿಸುತ್ತಾ ಯೋಚಿಸುತ್ತಾ ನಿದ್ರೆ ಹತ್ತಿತು.

ಎಚ್ಚರವಾದಾಗ ನಿಜವಾಗಿಯೂ ಪೋಲೀಸಿನವರು ನನ್ನ ಮುಂದೆ ನಿಂತಿದ್ದರು. ಶ್ರೀನಿವಾಸನ ಮನೆಯ ಕೆಲಸದವಳು ನನ್ನ ಗುರುತು ಹಿಡಿದಿದ್ದಳು. ನನ್ನನ್ನು ಕೈದು ಮಾಡಲಾಯಿತು.



ನನ್ನ ಹೆಂಡತಿಯೆನ್ನುವಾಕೆ ನನ್ನ ಬಗ್ಗೆ ವಕೀಲರನ್ನು ನಿಯಮಿಸಿದ್ದಳು. ಜಡ್ಜರ ಮುಂದೆ ನನ್ನನ್ನು ನಿಲ್ಲಿಸಲಾಗಿತ್ತು. ಎದುರುಗಡೆಯ ವಕೀಲರು ಪ್ರಶ್ನಿಸಿದರು.

"ನಿನ್ನ ಹೆಸರೇನು?"

"ಆತ್ಮಾರಾಮ ಶಾಸ್ತ್ರಿ!"

ಎಲ್ಲರಿಗೂ ಆಶ್ಚರ್ಯವಾಯಿತು. ನನ್ನ ಕಡೆಯ ವಕೀಲ ಹೇಳಿದ:

"ಈ ಮನುಷ್ಯ ಹೇಳುವುದು ಸರಿಯಲ್ಲ. ಈತನ ಹೆಸರು ಸಂಕಪ್ಪ ಶೆಟ್ಟಿ"

ನನ್ನ ಕಡೆಯ ಸಾಕ್ಷಿಗಳೂ, ನನ್ನ ಹೆಂಡತಿಯೆಂಬಾಕೆಯೂ ನಾನು ಸಂಕಪ್ಪ ಶೆಟ್ಟಿಯೆಂದು ಒಪ್ಪಿದರು. ನಾನು ಮಾತ್ರ ಅಲ್ಲಗಳೆದೆ :-

"ನಾನು ಆತ್ಮಾರಾಮ ಶಾಸ್ತ್ರಿ. ನಾನು ಸತ್ತದ್ದು ತಾ. ೧೩.೮.೧೯೩೧ರಲ್ಲಿ..."

ಎಂದು ಮುಂತಾಗಿ ನನ್ನ ಎಲ್ಲ ವಿಷಯಗಳನ್ನೂ ಹೇಳಿದೆ.

ಆದರೆ ಆತ್ಮಾರಾಮ ಶಾಸ್ತ್ರಿ ಸತ್ತು ಆರು ವರ್ಷಗಳಾಗಿದ್ದವು. ನನ್ನನ್ನು ಯಾರೂ ನಂಬಲಿಲ್ಲ.

ಖೂನಿ ಮಾಡಿದ್ದನ್ನು ನಾನು ಒಪ್ಪಿದ ಹಾಗಾಯಿತು. ಕೊನೆಗೆ ನನ್ನ ಕಡೆಯ ವಕೀಲರು ಹೊಸ ಯುಕ್ತಿಯೊಂದನ್ನು ಹೂಡಿದರು.

"ಈ ಮನುಷ್ಯನು ಹುಚ್ಚುಹಿಡಿದು ಈ ರೀತಿ ಮಾತಾಡುತ್ತಿದ್ದಾನೆ. ಒಂದು ವೇಳೆ ಈತನೇ ಖೂನಿಯನ್ನು ಮಾಡಿರಬಹುದಾದರೂ ಇವನಿಗೆ ಆಗ ಬುದ್ಧಿ ಸ್ವಾಸ್ಥ್ಯವಿರಲಿಲ್ಲವಾಗಿ ಇವನು ಕ್ಷಮಾರ್ಹನಾಗಿದ್ದಾನೆ."

ನಾನು ಏನೆಂದರೂ ಯಾರೂ ಕೇಳಲಿಲ್ಲ. ಹುಚ್ಚಿನ ವಿಷಯ ಪರಿಶ್ರಮವುಳ್ಳ ಡಾ। ಪಿಕಾರ್ಡೋರವರನ್ನು ಕರೆಸಲಾಯಿತು. ಅವರು ಎಲ್ಲ ಪರೀಕ್ಷೆಗಳನ್ನು ಮಾಡಿ ಹುಚ್ಚಲ್ಲವೆಂದು ನಿರ್ಧಾರ ಕೊಟ್ಟರು.

ಆದರೂ ನಾನು ಆತ್ಮಾರಾಮ ಶಾಸ್ತ್ರಿಯೆಂದು ಯಾರೂ ಒಪ್ಪಲಿಲ್ಲ.

▲▲▲

ನನ್ನ ಹೆಂಡತಿಯೆಂಬಾಕೆಯ ಹತ್ತಿರ ತುಂಬ ಹಣವಿತ್ತು. ಆಕೆ ನನ್ನ ಹುಚ್ಚನ್ನು ಸ್ಥಾಪಿಸಿಯಾದರೂ ನನ್ನನ್ನು ಬದುಕಿಸುವ ಹಠ ತೊಟ್ಟಿದ್ದಳು. ಅದಕ್ಕಾಗಿ ಕಲ್ಕತ್ತೆಯಿಂದ ಒಬ್ಬ ಯುರೋಪಿಯನ್ ಡಾಕ್ಟರನ್ನು ಕರೆಸಿದಳು.

ಅವರು ಪರೀಕ್ಷಿಸಿ ತುಂಬಾ ವಿಚಾರಿಸಿ ಕೋರ್ಟಿನ ಮುಂದೆ ಸಾಕ್ಷ್ಯ ಕೊಟ್ಟರು.

"ಈ ಮನುಷ್ಯ ಹುಚ್ಚನಲ್ಲ. ಇದು ಸತ್ತವನ ಮನಸ್ಸು ಹೊಸ ಮನುಷ್ಯನಲ್ಲಿ ಸಮಾವೇಶ ಹೊಂದಿದ ಒಂದು ಸಂದರ್ಭವಾಗಿರಬೇಕು. ಇಂತಹ ಕೇಸುಗಳು ಕೆಲವು ವೇಳೆ ಸಂಭವಿಸಿದ್ದನ್ನು ನಾನು ಕೇಳಿದ್ದೇನೆ. ಇದು ಹೊರತಾಗಿ ನನಗೇನೂ ಈ ವಿಷಯ ಹೊಳೆಯುವುದಿಲ್ಲ. ಬುದ್ಧಿಯ ಎಲ್ಲ ವಿಚಾರಗಳನ್ನು ಪರಿಶೀಲಿಸಿದಲ್ಲಿ ಈತನು ಆತ್ಮಾರಾಮ ಶಾಸ್ತ್ರಿಯೇ ಎಂದು ಯಾರೂ ಒಪ್ಪಬೇಕು. ಆದರೆ ಸಾಕ್ಷ್ಯಗಳ ವಿಚಾರಣೆ ನಡೆಸಿದರೆ ಈತನು ಸಂಕಪ್ಪ ಶೆಟ್ಟಿಯೇ ಸರಿ. ಹೀಗಿರುತ್ತಾ ಸಂಕಪ್ಪ ಶೆಟ್ಟಿಯ ಕಾಯವನ್ನು ಆತ್ಮಾರಾಮ ಶಾಸ್ತ್ರಿಯ ಆತ್ಮವು ಹೊಕ್ಕಿರಬೇಕು. ಇನ್ನೆಂದಾದರೂ ಒಂದು ದಿನ ಸಂಕಪ್ಪ ಶೆಟ್ಟಿಯ ಆತ್ಮವೇ ಈತನ ಶರೀರದೊಳಗೆ ಬರುವ ಸಂಭವವೂ ಇದೆ."

ಅನುಮಾನಕರ ಪ್ರಸಂಗವಾದುದರಿಂದ ನನ್ನನ್ನು ಬಿಟ್ಟುಬಿಡಲಾಯಿತು.

ನಾನು ಸಂಕಪ್ಪ ಶೆಟ್ಟಿಯೋ ಆತ್ಮಾರಾಮ ಶಾಸ್ತ್ರಿಯೋ, ಬಗೆಹರಿಯದಾಯಿತು.

▲▲▲

ಬಿಡುಗಡೆಯಾದ ಮೇಲೆ ನನ್ನ ಹೆಂಡತಿಯೆಂಬಾಕೆಯು ನನ್ನನ್ನು ಕರೆದುಕೊಂಡು ತನ್ನ ಮನೆಗೆ ಹೋದಳು.

ಎಲ್ಲರೂ ನನಗೆ ಹುಚ್ಚು ಹಿಡಿದಿದೆಯೆಂಬುದನ್ನು ನಂಬುತ್ತಿದ್ದರು. ನನ್ನ ಹೆಂಡತಿಯು ನನ್ನ ಹುಚ್ಚನ್ನು ಬಿಡಿಸುವುದಕ್ಕೆ ಹೇರಳ ಹಣವನ್ನು ವೆಚ್ಚ ಮಾಡಿದಳು. ಏನೂ ಸಾಗಲಿಲ್ಲ. ಆದರೂ ಇನ್ನೂ ಪ್ರಯತ್ನಗಳು ಮುಗಿದಿಲ್ಲ.

ಈ ಮಧ್ಯೆ ಆಕೆಯ ಕೈಯಿಂದ ಬಿಡಿಸಿಕೊಂಡು ಹೊರಟುಹೋಗಬೇಕೆಂದು ಎಷ್ಟೆಷ್ಟೋ ಉಪಾಯಗಳನ್ನು ಮಾಡಿದೆ. ನನಗೆ ಹುಚ್ಚು ಹಿಡಿದಿಲ್ಲ, ನಾನು ಆತ್ಮಾರಾಮ ಶಾಸ್ತ್ರಿಯೇ, ಆಕೆ ನನ್ನ ಹೆಂಡತಿಯಲ್ಲ ಎಂದು ಆಕೆಯ ತಲೆಗೆ ಹೊಗಿಸುವುದಕ್ಕಾಗಿ, ಒಡಂಬಡಿಸುವುದಕ್ಕಾಗಿ ಆಕೆಯನ್ನು ಕೇಳಿದೆ -

"ನೋಡು, ನಿನ್ನ ಗಂಡನಿಗೆ ಸಂಸ್ಕೃತ ಬರುತಿತ್ತೆ?"

"ಇಲ್ಲ."

"ಹಾಗಾದರೆ ನೋಡು" ಎಂದು ಸಂಸ್ಕೃತದ ಮಹಾ ಮಹಾ ವಾಕ್ಯಗಳನ್ನು, ವೇದ ಋಕ್ಕುಗಳನ್ನು ಹೇಳಿದೆ.

ಏನೇನು ಮಾಡಿದರೂ ಆಕೆಯನ್ನು ಒಡಂಬಡಿಸಲು ನೂಕಲಿಲ್ಲ.

ದಿನ ನಿತ್ಯವೂ ನನಗೆ ಹುಚ್ಚೆಂದು ಒಡಂಬಡಿಸುವುದಕ್ಕಾಗಿ ಎಲ್ಲರೂ ಪ್ರಯತ್ನ ಮಾಡುತ್ತಿದ್ದಾರೆ. ನನಗೆ ಎಲ್ಲ ವಿಧದ ಔಷಧಗಳನ್ನು ಒತ್ತಾಯದಿಂದ ಕುಡಿಸುತ್ತಾರೆ. ಒಂದೊಂದು ಬಾರಿ ನನಗೆ ನಿಜವಾಗಿಯೂ ಹುಚ್ಚೆ? ಎನ್ನಿಸುತ್ತದೆ.

ನಿತ್ಯವೂ ಕನ್ನಡಿಯಲ್ಲಿ ನನ್ನನ್ನೇ ನೋಡಿಕೊಳ್ಳುತ್ತೇನೆ. ಆಗ ನನಗೆ ಬಹಳ ಭಯವಾಗುತ್ತದೆ. ನಾನು ನಾನಲ್ಲ!

ಈ ಜನರ ವರ್ತನೆಗಳು, ಆಹಾರಗಳು ನನಗೆ ಒಗ್ಗುವುದಿಲ್ಲ. ನನ್ನ ಮನಸ್ಸಿನಲ್ಲಿ ಭೀತಿ, ಅನುಮಾನ ಅಸಹ್ಯಗಳು ತುಮುಲವನ್ನೆಬ್ಬಿಸುತ್ತಿವೆ.

ಈ ರೀತಿ ಬದುಕಿರುವುದಕ್ಕೆ ನನಗೆ ಇಚ್ಛೆಯಿಲ್ಲ. ಅದಕ್ಕಾಗಿ ನಾನು ಸಾಯುವ ನಿರ್ಧಾರ ಮಾಡಿದ್ದೇನೆ.

ಅದಕ್ಕಾಗಿ ಮನೆಯಿಂದ ಓಡಿ ಬಂದಿದ್ದೇನೆ.

▲▲▲

ಇದು ಮೊನ್ನೆ ರೈಲಿನ ಅಡಿಗೆ ಬಿದ್ದು ಆತ್ಮಹತ್ಯೆ ಮಾಡಿಕೊಂಡ ಸಂಕಪ್ಪ ಶೆಟ್ಟಿಯ ಚೀಲದಲ್ಲಿದ್ದ ಪತ್ರ.

❑

(ಇಂಗ್ಲೀಷ್ ಕತೆಯೊಂದರ ಆಧಾರ)

## ೩. ಪಿಶಾಚಿಯ ತವರುಮನೆ

ರಾತ್ರಿ ಒಂಭತ್ತು ಘಂಟೆಯಾದರೂ ಅಂಗರ ಮತ್ತು ತೋಮರರಿಗೆ ಮನೆಯ ನೆನಪೇ ಆಗಿರಲಿಲ್ಲ. ಅವರು ಗಡಂಗಿ (ಹೆಂಡದಂಗಡಿ)ಯಲ್ಲಿ ಒಂದೇ ಸಮನೆ ಕುಡಿಯುವುದರಲ್ಲೇ ಮಗ್ನರಾಗಿದ್ದರು. ಅವರಿಬ್ಬರೂ ಒಂದೇ ಕಡೆ ಕೆಲಸ ಮಾಡುವವರು, ಒಡಲ ಗೆಳೆಯರು, ಎಲ್ಲಕ್ಕಿಂತಲು ಹೆಚ್ಚು ಒಬ್ಬಳೇ ಮದಿರಾದೇವಿಯ ಅವಿಚ್ಛಿನ್ನ ಭಕ್ತರು. ಮೇಲಾಗಿ ಇಂದು ತಿಂಗಳ ಸಂಬಳ ಅವರ ಕೈಗೆ ಬಂದಿತ್ತು. ಜಣಜಣಿಸುವ ರೂಪಾಯಿಗಳು ಅವರ ಜೇಬಿನೊಳಗೆ ಮಿನುಗುತ್ತಿದ್ದುವು. ಕೂಲಿಗಾರ ಜೀವನದ ಏಕತಾನದ, ಕಷ್ಟ ನಿಷ್ಠುರಗಳ, ಹಸಿವೆ ನೀರಡಿಕೆಗಳ, ಸಾಲಸೋಲುಗಳ ನಡುವೆಯೂ ತಿಂಗಳ ಸಂಬಳದ ದಿನವೊಂದು ಕಟ್ಟಿರುಳಿನ ಹಣತೆ ದೀಪದಂತೆ ಅವರಿಗೆ ಸಂತಸದ ಸಂದರ್ಭ.

ಆ ಗೆಳೆಯರು ಕಾರಖಾನೆಯಿಂದ ಹೊರಟವರು ಮನೆಸೇರದೆ ಸೀದಾ ಹೆಂಡದಂಗಡಿಯ ದಾರಿಯೇ ಹಿಡಿದಿದ್ದರು. ಮನೆ ಸೇರಿದರೆ ಜೇಬಿನೊಳಗಿದ್ದ ಐದಾರು ರೂಪಾಯಿಗಳೂ ತಿಂಗಳ ಸಾಲಕ್ಕೆ ಸಾಲದಾಗಿದ್ದುವು. ಕಾರಖಾನೆಯ ಗೇಟಿನ ಮುಂದೆ ಕಾದು ನಿಂತಿದ್ದ ಸಾಲಗಾರರ ನೋಟದಿಂದ ತಪ್ಪಿಸಿಕೊಂಡು ಇವರು ಹಿಂಬಾಗಿಲಿನಿಂದಲೇ ಜಾರಿಬಿಟ್ಟಿದ್ದರು. ಇಷ್ಟೊಂದು ಜತನದಿಂದ ಕಾಪಾಡಿಕೊಂಡ ಆ ಹಣವನ್ನು ದರಿಯಿಂದ ತಪ್ಪಿಸಿಕೊಂಡು ಹುಲಿಯ ಬಾಯಿಗೆ ಬೀಳುವಂತೆ ಮನೆಯ ಮುಂದೆ ಕಾಯುತ್ತಿದ್ದ ಸಾಲಿಗರಿಗೆ ದಾನಮಾಡುವ ಸಂದರ್ಭವನ್ನು ತಂದುಕೊಳ್ಳಲು ಅವರು ಇಚ್ಛಿಸುತ್ತಿದ್ದಿಲ್ಲ. ತಮ್ಮ ಬಯಕೆಯ ಕೊಡವನ್ನು ತುಂಬಿಕೊಳ್ಳಲಾಶಿಸುತ್ತಿದ್ದರು.

ತೋಮರ-ಅಂಗರರು ಪಂಥಹಾಕಿ ಕುಡಿಯುತ್ತಿದ್ದರು. ಅಂಗರ ಇಂತಿಷ್ಟು ಬಾಟಲಿ ಹೆಂಡ ಕುಡಿಯುವುದೆಂದು ಪಂಥ ಹಾಕಿದ್ದ. ತೋಮರ "ನಿನಗಿಂತ ಎರಡು ಬಾಟಲಿ ಹೆಚ್ಚು ಕುಡಿಯುತ್ತೇನೆ" ಎಂಬ ಪಣತೊಟ್ಟಿದ್ದ. ಹೀಗೆ ಅವರ ಕುಡಿತ ಭರದಿಂದ ಸಾಗಿತ್ತು. ಬಾಟಲಿಗಳ ಮೇಲೆ ಬಾಟಲಿಗಳು ಖಾಲಿಯಾಗುತ್ತಿದ್ದವು.

ಹೆಂಡವೆಂದರೆ ಅದೇನು ವಿಚಿತ್ರ ವಸ್ತುವೋ ನಾ ಕಾಣೆ! ಒಬ್ಬ ಕುಡುಕನ ಹೊಟ್ಟೆಯಲ್ಲಿ ಇಂತಿಷ್ಟೇ ಬಾಟಲಿ ಹೆಂಡ ಹಿಡಿಯಬಲ್ಲುದು, ಎಂಬ ನಿಯಮವಿದ್ದಂತೆ ಕಾಣುವುದಿಲ್ಲ. ಹಾಗಾಗಿ ತೋಮರ - ಅಂಗರರು ಹೆಂಡದಂಗಡಿ ಬಿಡುವಾಗ ಅವರಿಬ್ಬರ ಜೇಬುಗಳೂ ಬಕ್ಕ ಬರಿದಾಗಿದ್ದುವು. ಹೊತ್ತೂ ಹತ್ತೂವರೆ ಗಂಟೆಯಾಗಿದ್ದಿತು. ಕೊನೆಗೂ ತೋಮರನೇ ಸೋಲವನ್ನು ಕಿತ್ತುಕೊಂಡಿದ್ದ. ಅಂಗರನಿಗಿಂತ ಎರಡಲ್ಲ ನಾಲ್ಕು ಬಾಟಲಿ ಹೆಚ್ಚಿಗೆ ಇಳಿಸಿಬಿಟ್ಟಿದ್ದನಾತ!

ಗಡಂಗಿನವನ ಒತ್ತಾಯಕ್ಕಲ್ಲದೆ ತಾವಾಗಿಯೇ ಸ್ವೇಚ್ಛೆಯಿಂದ ಹೊರಟದ್ದಲ್ಲ ಅವರು. ಮನೆಯು ಅವರನ್ನು ಸೆಳೆದದ್ದಲ್ಲ. ಕುಡಿತದ ಅಮಲಿನಲ್ಲಿ ಅವರಿಗೆ ಮನೆಯೊಂದೇ ಏನು? ಇಡಿಯ ಜಗತ್ತೇ ದೊಡ್ಡ ಸೊನ್ನೆಯಾಗಿ ಹೋಗಿತ್ತು. ಅಂಗಡಿಯವನು ಹೊರಗೆ ಹಾಕಿದ್ದರಿಂದ, ಬೇರಾವ ದಾರಿಯೂ ತೋರದ್ದರಿಂದ, ಅಭ್ಯಾಸದ ಬಲದಿಂದ ಅವರು ತಮ್ಮ ತಮ್ಮ ಮನೆಯ ದಾರಿ ಹಿಡಿದಿದ್ದರು.

▲▲▲

ತಿಂಗಳ ಬೆಳಕು ಮಸು ಮಸುಕಾಗಿ ಹಬ್ಬಿತ್ತು. ತೋಮರನ ಗುಂಗಿನ ಮಹಾತ್ಮೆಯಿಂದ ಅದು ಇನ್ನೂ ಹೆಚ್ಚು ಮಸುಕಾಗಿ ತೋರುತ್ತಿತ್ತು. ಅವನಿಗೆ ಇಡಿಯ ಜಗತ್ತೇ ತೂಗುಯ್ಯಾಲೆಯಲ್ಲಿ ಜೋಲಾಡುತ್ತಿರುವಂತೆ ಭಾಸವಾಗುತ್ತಿತ್ತು. ಎತ್ತಿದ ಪಾದವನ್ನು ನೆಲಕ್ಕೆ ಇಳಿಸುವುದರೊಳಗೆ ನೆಲವು ಮೊದಲಿದ್ದಲ್ಲಿಂದ ಎರಡು ಗಜ ಕೆಳಗೆ ಕುಗ್ಗಿ ಹೋದಂತೆ ಭ್ರಾಂತಿಯಾಗುತ್ತಿತ್ತು. ಅದಕ್ಕಾಗಿ ಪಾದವನ್ನು ಬಹಳ ಜಾಗರೂಕತೆಯಿಂದಲೇ ಕೆಳಗಿಳಿಸುತ್ತಿದ್ದ. ಈ ಕಾಟವನ್ನು ತಡೆಯಲಾರದೆ ಕೊನೆಗೆ ಮಾರ್ಗದಿಂದಿಳಿದು ಕಾಲುದಾರಿಯನ್ನು ಸೇರಿ ಸಾಲುಮರಗಳನ್ನು ಮುಟ್ಟಿಕೊಂಡು ಅವುಗಳ ಆಧಾರದ ಮೇಲೆ ಸಾಗುತ್ತಿದ್ದ.

ಹೀಗೆ ಹೇಗೋ ಹೇಗೊ ತೋಮರ ದಾರಿನಡೆದು ಮಾರ್ಗದ ಕೊನೆಯಲ್ಲಿದ್ದ ತನ್ನ ಗುಡಿಸಲನ್ನು ಸೇರುವಾಗ ಹನ್ನೊಂದೂವರೆ ಗಂಟೆಯಾಗಿತ್ತು. ಮನೆಯ ಮುಂದೆ ಹೋಗಿ ನಿಂತು ತೋಮರ 'ದುಗ್ಗೀ' ಎಂದು ಒರಲಿದ. ಆದರವನ ನಾಲಗೆ ಕೊಜರುತ್ತಿತ್ತು. ಅವನೆಷ್ಟು ಗಟ್ಟಿಯಾಗಿ ಕರೆದರೂ ಅದು ಬಹಳ ದೂರ ಕೇಳುವಂತಿರಲಿಲ್ಲ. ಹೀಗಿರುತ್ತಾ ಬರಿ ಹೊಟ್ಟೆಯಲ್ಲಿ ಗಂಡನ ಬರವನ್ನು ಕಾದು ಕಾದು ಬೇಸತ್ತು ಅಲ್ಲೇ ನಿದ್ದೆ ಹೋಗಿದ್ದ ದುಗ್ಗಿಗೆ ಎಚ್ಚರವಾಗುವುದೆಂತು?

ದುಗ್ಗಿಗೆ ಎಚ್ಚರವಾಗಲಿಲ್ಲ. ತೋಮರ ತನ್ನ ಶಕ್ತಿಮೀರಿ ನಾಲ್ಕಾರು ಬಾರಿ ಕೂಗಿದ ನಿಷ್ಪ್ರಯೋಜನ ಬಾಯಿಗೆ ಬಂದಂತೆ ಬೈಯುತ್ತಾ ನಿಂತ. ಆದರೂ ಉತ್ತರವಿಲ್ಲ.

ಫಕ್ಕನೆ ತೋಮರನ ಕಣ್ಣಿಗೆ ಬೆಳ್ಳಗಿನ ನೆರಳೊಂದು ಗೋಚರವಾದಂತಾಯಿತು. ಅದು ಮನೆಯ ಮೆಟ್ಟಿಲಿನಿಂದಿಳಿದು ತೋಟದ ಮರಗಳೆಡೆ ಅದೃಶವಾದಂತಾಯಿತು. ತೋಮರನು ಒಂದೇ ಪೆಟ್ಟಿಗೆ ಅದೊಂದು ಗಂಡಸೆಂದು ನಿರ್ಧಾರ ಮಾಡಿಕೊಂಡ. ಸ್ವಲ್ಪ ದೂರ ಪೊಂಗುತ್ತಾ ಅದರ ಬೆನ್ನಟ್ಟುವ ಪ್ರಯತ್ನ ಮಾಡಿದ. ಆದರೆ ಮನುಷ್ಯನಿದ್ದರಲ್ಲವೇ ಸಿಕ್ಕುವುದು. ತಿಂಗಳ ಬೆಳಕಿನಲ್ಲಿ ತೆಂಗಿನ ಮಡಲ ನೆರಳು ಅಲ್ಲಾಡುವುದನ್ನು ನೋಡಿಯೇ ಅವನು ಮೋಹಿತನಾದದ್ದು.

ಕುಡುಕನ ತಲೆಯೊಳಗೊಂದು ವಿಚಾರ ನುಗ್ಗಿತೆಂದರೆ ಮತ್ತೆ ಅದನ್ನು ಯಾರಿಂದಲೂ ಹೊರ ಹೊರಡಿಸಲು ಸಲ್ಲದು. ಸಂಶಯ ಚಿತ್ತವೆಂದರೆ ಪಿಶಾಚಿಯ ತವರುಮನೆ. ತೋಮರ ತನ್ನ ಸುತ್ತುತ್ತಿರುವ ಮೆದುಳನ್ನು ಸ್ತಿಮಿತಕ್ಕೆ ತಂದುಕೊಳ್ಳುತ್ತಾ ಚಿಂತಿಸಲೆಳಸಿದ. ರಾತ್ರಿ ತಾನಿಲ್ಲದ ವೇಳೆ ಗಂಡಸೊಬ್ಬ ತನ್ನ ಮನೆಗೆ ಏತಕ್ಕಾಗಿ ಬಂದಾನು? ಅದೂ ದುಗ್ಗಿ ಒಬ್ಬಳೇ ಇದ್ದಾಳೆ. ಹ ಹ್ಹಾಂ! ಅವಳ ಮಿಂಡನಿರಬೇಕು!

ಆ ಯೋಚನೆ ಬಂದದ್ದೇ ತಡ! ತೋಮರನಿಗೆ ಎಲ್ಲಿಲ್ಲದ ಸಿಟ್ಟು ಬಂತು. ಒರಲುತ್ತಿರುವ ಬಾಯಿಂದ.

'ರಂ....ಡೇ! ನಾನು.. ಇಲ್ದೇ..ಇರುವಾಗ..ಮಿಂಡನ್ನ ಬರ್ಸಿಕೊಂಡು ...ಈಗ ನಿದ್ದೆ ಬಂದದೇಂತ...ಕ..ಖಳ್ಳತನ ತೋರ್ಸ್ತಿಯಾ?' ಎನ್ನುತ್ತಾ ಮನೆಯೊಳಗೆ ನುಗ್ಗಿದ. ದಾರಿಯಲ್ಲಿ ಒಂದು ಹರಕು ಮುರುಕು ಕುರ್ಚಿಯಿತ್ತು. ಮಬ್ಬಿನಲ್ಲಿ

ಅದನ್ನು ನೋಡಿಕೊಳ್ಳದೆ ಎಡವಿ ಬಿದ್ದ. ಸಿಟ್ಟು ಮತ್ತಷ್ಟು ತಲೆಗೇರಿತು. "ಓಹೋ
ನನ್ನ..ನ್ನಾನು ಬಿಳ್ಬೇಕೂಂತ..ಕುರ್ಚಿ ಅಡ್ಡ ಇಟ್ಟಿದ್ದೀಯಾ..' ಎಂದು ಒಳದನಿಯಲ್ಲಿ
ಬೈದುಕೊಳ್ಳುತ್ತಾ ಮೆಲ್ಲನೆ ಎದ್ದು ನಿಂತ. ಅವನಿಗಾಗ ಪ್ರಚಂಡ ಶಕ್ತಿ ಬಂದಂತೆ
ತೋರಿತು! ಅದೇ ಮುರುಕು ಕುರ್ಚಿಯನ್ನೆತ್ತಿಕೊಂಡು ಪಡಸಾಲೆಯೊಳಗೆ ನುಗ್ಗಿದ
ಗಂಡ ಬರುತ್ತಾನೆಂದು ಬಾಗಿಲು ತೆರೆದಿಟ್ಟು ಕುಳಿತಿದ್ದ ಹೆಂಗಸಿಗೆ ಪಾಪ ಹಾಗೇ ನಿದ್ದೆ
ಬಂದುಹೋಗಿತ್ತು. ಗೋಡೆಯ ಕಂಡಿಯಲ್ಲಿ ಹಣತೆಯ ದೀಪವೊಂದು ಈಗಲೋ
ಇನ್ನೊಂದು ನಿಮಿಷಕ್ಕೋ ನಂದಿಹೋಗುವ ಸ್ಥಿತಿಯಲ್ಲಿತ್ತು. ಆ ದೀಪಕ್ಕೆ ಸ್ವಲ್ಪ
ದೂರ ತೋಳ ತಲೆದಿಂಬಿನ ಮೇಲೆ ಬರಿ ನೆಲದಲ್ಲಿ ದುಗ್ಗಿ ನಿದ್ದೆ ಹೋಗಿದ್ದಳು.

ಕುಡುಕ ಅವಳ ನಿದ್ದೆಯನ್ನು ಕಳ್ಳನಿದ್ದೆಯೆಂದೇ ಭಾವಿಸಿದ. ಅವನ ಕೋಪ
ಇಮ್ಮಡಿಸಿತು. ಕುರ್ಚಿಯನ್ನೆತ್ತಿ ಬಲವಾದ ಒಂದು ಪೆಟ್ಟನ್ನು ಅವಳ ಮೇಲಿಳಿಸಿದ.
ಅದೇ ಹೊತ್ತಿಗೆ ಹಣತೆಯೂ ಆರಿಹೋಯಿತು.

ಸರಿ! ಮತ್ತೆ ಅದೇ ರೀತಿ ಎಷ್ಟು ಹೊತ್ತು ಹೊಡೆಯುತ್ತಿದ್ದನೋ ಅವನಿಗೆ
ಗೊತ್ತಿದ್ದಿಲ್ಲ. ಕುರ್ಚಿ ಸಂಪೂರ್ಣವಾಗಿ ಪುಡಿಪುಡಿಯಾಗಿ ಎರಡು ಕೈಲಿ ಅದರ
ಎರಡು ಕಾಲುಗಳು ಮಾತ್ರವೇ ಉಳಿದಿದ್ದರೂ, ತೋಮರನ ಬಡಿತ ನಿಲ್ಲಲಿಲ್ಲ..

ಕೊನೆಗೆ ಕೈಕಾಲು ಬಳಲಿ ಬಳಿಯಲ್ಲಿಯೇ ಮಲಗಿ ತೋಮರ ಗಾಢ
ನಿದ್ರೆಯಲ್ಲಿ ಮುಳುಗಿ ಹೋದ.

▲▲▲

ಮರುದಿನ ಮುಂಜಾನೆ ಒಂಭತ್ತು ತಾಸಾದರೂ ಮನೆಯ ಹೊರಗೆ ಯಾರ
ಸುಳಿವೂ ಇಲ್ಲದ್ದನ್ನೂ, ಬಾಗಿಲು ತೆರೆದಿದ್ದುದನ್ನೂ ಕಂಡು ನೆರೆಮನೆಯವಳೊಬ್ಬಳು
ಒಳಗೆ ಹಣಕಿದಳು. ಬಹಳ ಭಯಂಕರ ದೃಶ್ಯವೊಂದು ಅವಳ ಕಣ್ಣಿಗೆ ತೋರಿತು.
ದುಗ್ಗಿಯ ನೆತ್ತರು ಕಾಲವೆಯಾಗಿ ಹರಿದು ಹೆಪ್ಪುಗಟ್ಟಿತ್ತು. ಗುರುತೂ ಸಿಕ್ಕದಷ್ಟು
ಜರ್ಜರಿತವಾಗಿತ್ತು ಅವಳ ಮೈಮಂಡೆ.... ಆ ನೆತ್ತರು ಕೊಂಡದ ಬಳಿ ನೆಲದ
ಮೇಲೆ ತೋಮರ ಗಟ್ಟಿಯಾಗಿ ಗೊರಕೆ ಹೊಡೆಯುತ್ತಿದ್ದ.

ಪೋಲೀಸಿನವರು ಬಂದು ನಾಲ್ಕಾರು ಒದೆಗಳನ್ನು ಕೊಡುವವರೆಗೆ
ತೋಮರನಿಗೆ ಎಚ್ಚರವಾಗಲಿಲ್ಲ. ಎಚ್ಚರವಾದ ಮೇಲೆ ಅವನನ್ನು ವಿಚಾರಿಸಿದರೆ
ಹಿಂದಿನ ರಾತ್ರಿ ನಡೆದುದರ ಒಂದು ಅಣುಮಾತ್ರವೂ ಅವನಿಗೆ ನೆನಪಾಗಲಿಲ್ಲ!

❑

## ೪. ಕಣ್-ಸನ್ನೆ

ಮಾರ್ಕಿಸ್ ಡಿ ರೆನ್ನೆಡನ್ ಇನ್ನೂ ನಿದ್ರೆಯಲ್ಲಿಯೇ ಇದ್ದಳು... ತನ್ನ ಬೆಚ್ಚಗಿನ, ಪರಿಮಳ ತುಂಬಿದ ಕೋಣೆಯಲ್ಲಿ; ಮೆತ್ತನ್ನ ತಗ್ಗಾದ, ಅಗಲ ಹಾಸುಗೆಯಲ್ಲಿ; ಪ್ರೇಮದಂತೆ ಭಂಗುರವಾದ, ಮುತ್ತಿನಂತೆ ಮುದ್ದಾದ ನುಣ್ಣಗಿನ ಹೊದಿಕೆಗಳೆಡೆಯಲ್ಲಿ. ಆಕೆ ಏಕಾಕಿನಿಯಾಗಿ, ಶಾಂತಿಯಿಂದ ಮಲಗಿ ಗಂಡ ತೊರೆದ ಹೆಂಡತಿಯ ಆಳವಾದ ಸುಖನಿದ್ರೆಯಲ್ಲಿ ಮಗ್ನಳಾಗಿದ್ದಳು.

ಬೈಠಕ್ ಖಾನೆಯಲ್ಲಿಯ ಕೀರುದನಿಯ ಮಾತುಗಳಿಂದ ಅವಳಿಗೆ ಎಚ್ಚರವಾಯಿತು. ತನ್ನ ಪ್ರಿಯ ಸಖಿಯಾದ ಬೆರನೆಸ್ ಡಿ ಗ್ರೆಂಗೇರಿಯು ಬಂದು ತನ್ನ ಚಾಕರಿಯವಳೊಡನೆ ಪ್ರವೇಶಕ್ಕಾಗಿ ಚರ್ಚಿಸುತ್ತಿದ್ದಳೆಂದು ಅವಳಿಗೆ ತಿಳಿದುಬಂತು.

ಮಾರ್ಕಿಸಳು ಎದ್ದು ಬಾಗಿಲು ತೆರೆದು ಕುರುಳುಗಳೆಡೆ ಅರೆಮರೆಯಾಗಿದ್ದ ತನ್ನ ಮೊಗವನ್ನು ಮಾತ್ರ ಹೊರಗಿಕ್ಕಿದಳು.

"ಏನಮ್ಮಾ, ಇಷ್ಟು ಬೇಗ ಈ ಕಡೆ ಏನು ಬಂದೆ? ಇನ್ನೂ ಒಂಭತ್ತು ಗಂಟೆಯಾಗಿಲ್ಲ."

ಬೆರನೆಸಳ ಮುಖ ಬಿಳುಪೇರಿದ್ದಿತು; ಕಂಗೆಟ್ಟು ನಡುಗುವ ದನಿಯಿಂದ ಹೇಳಿದಳು :

"ನಿನ್ನೊಡನೆ ಮಾತನಾಡುವ ಕೆಲಸವಿದೆ. ಒಂದು ಭಯಂಕರ ಪ್ರಸಂಗ ನಡೆದುಹೋಗಿದೆ."

"ಬಾರಮ್ಮಾ ಒಳಗೆ."

ಅವಳು ಒಳಗೆ ಬಂದಳು. ಸಖಿಯರಿಬ್ಬರೂ ಮುತ್ತಿಟ್ಟುಕೊಂಡರು. ಮಾರ್ಕಿಸಳು ಪುನಃ ತನ್ನ ಸುಪ್ಪತ್ತಿಗೆಯ ಮೇಲೇರಿದಳು. ಚಾಕರಿಯವಳು ಕಿಟಕಿಗಳನ್ನೆಲ್ಲಾ ತೆರೆದು ಶುದ್ಧವಾದ ಬೆಳಕುಗಾಳಿಗಳನ್ನು ಒಳಗೆ ಬಿಟ್ಟಳು. ಆಕೆ ಹೊರಗೆ ಹೋದ ಮೇಲೆ ಮಾರ್ಕಿಸ್ ರೆನ್ನೆಡನಳು, "ಏನಾಯಿತು ಹೇಳು," ಎಂದಳು.

ಗ್ರೆಂಗೇರಿ ಅಳತೊಡಗಿದಳು. ಹೆಂಗಸರ ಚೆಲುವಿಕೆಗೆ ಕಳೆಯೇರಿಸುವ ಆ ನಿರ್ಮಲ ಕಂಬನಿಗಳು ಕೆಳಗುದುರುತ್ತಿದ್ದರೂ, ಕಣ್ಣುಗಳು ಕೆಂಪೇರುವವ್ರೋ ಎಂಬ ಅನುಮಾನದಿಂದ ಅವನ್ನು ಒರಸಿಕೊಳ್ಳದೆಯೇ, ತಡೆತಡೆದು ನುಡಿದಳು. "ಬಹಳ ಭಯಂಕರ ಸಂಗತಿಯೊಂದು ನಡೆದು ಹೋಯಿತಮ್ಮಾ. ರಾತ್ರಿಯೆಲ್ಲಾ ಒಂದು ಕ್ಷಣ ನಿದ್ರೆ ಬೀಳಲಿಲ್ಲ. ನೋಡು, ನನ್ನ ಎದೆ ಹೇಗೆ ಹಾರುತ್ತಿದೆಯೆಂದು!"

ಹೀಗೆಂದು ಆಕೆ ಸಖಿಯ ಕೈಯನ್ನೆಳೆದು ತನ್ನೆದೆಗೆ, ಕಾಮಿನಿಯರ ಹೃದಯವನ್ನು ರಕ್ಷಿಸುವ, ಎಲ್ಲ ಪುರುಷರ ಆಶೆಯ ಏಕಮಾತ್ರ ವಸ್ತುವಾದ, (ಅದರೊಳಗಿರುವುದೇನೆಂಬ ಆತುರವಿಲ್ಲ ಅವರಿಗೆ) ಉನ್ನತ, ಬಂಧುರ, ಸುದೃಢ ವಕ್ಷಃಸ್ಥಲದ ಮೇಲೆ ಅದನ್ನೊತ್ತಿಕೊಂಡಳು! ನಿಜವಾಗಿಯೂ ಅವಳೆದೆಯು ವೇಗವಾಗಿ ಹೊಡೆದುಕೊಳ್ಳುತ್ತಿತ್ತು.

ಬೆರನೆಸ್ ಹೇಳತೊಡಗಿದಳು:

"ಸಂಗತಿ ನಡೆದದ್ದು ನಿನ್ನೆ ಹಗಲಲ್ಲಿ... ಸಾಯಂಕಾಲ ನಾಲ್ಕು ಘಂಟೆಯ ಸಮಯ. ನನ್ನ ಮನೆ ಗೊತ್ತಿದೆಯಲ್ಲ ನಿನಗೆ; ಅದರ ಒಂದನೆ ಮಾಳಿಗೆಯಲ್ಲಿ ನನ್ನ ಬೈಠಕ್ ಖಾನೆಯಿದೆಯಲ್ಲ; ಅದು ರೂಸೆಯಿಂಟ್ ಲಾಜಾರೆ ರಸ್ತೆಗೆ ತಾಗಿದೆ.. ಅಲ್ಲಿ ನನ್ನ ಕಿಟಕಿಯಿಂದ ರಸ್ತೆಯ ಮೇಲೆ ಸಂಚರಿಸುವ ಜನಸಂದಣಿಯನ್ನು ನೋಡುತ್ತ ಕೂತುಕೊಳ್ಳುವುದೆಂದರೆ ನನಗೆ ಬಹಳ ಮೆಚ್ಚಿನ ಕೆಲಸ. ನಿಲ್ದಾಣಕ್ಕೆ ಹೋಗುವ ಆ ರಸ್ತೆ ಅಷ್ಟು ಸುಂದರವಾಗಿದೆ - ಯಾವಾಗಲೂ ತುಂಬಿದ ನೆರೆಯಂತಿದೆ... ನಿನ್ನೆ ನಾನು ಆ ಕಿಟಕಿಯ ಬಳಿ ನನ್ನ ತಗ್ಗಿನ ಆರಾಮ ಕುರ್ಚಿಯನ್ನೆಳೆದು ಕುಳಿತಿದ್ದೆ; ಕಿಟಕಿಯ ಬಾಗಿಲುಗಳು ತೆರೆದಿದ್ದವು. ನನ್ನ ತಲೆಯಲ್ಲಿ ಯಾವ ಆಲೋಚನೆಯೂ

*ಇದು ಯೌರೋಪ್ಯರ ಪದ್ಧತಿ

ಇದ್ದಿಲ್ಲ; ಒಂದೇ ಸವನೆ ತಂಗಾಳಿಯ ಸೌಖ್ಯದಲ್ಲಿ ಬೆರೆತು ಹೋಗಿದ್ದೆ. ನಿನ್ನೆ ಸಾಯಂಕಾಲವೆಂದರೆ ಎಷ್ಟು ಚೆನ್ನಾಗಿತ್ತೆಂದು ನಿನಗೆ ಗೊತ್ತು.

"ಹಠಾತ್ತಾಗಿ ರಸ್ತೆಯ ಎದುರು ಪಕ್ಕದ ಕಿಟಕಿಯ ಬಳಿ ಕೂತಿರುವ ಹೆಂಗಸೊಬ್ಬಳನ್ನು ಕಂಡೆ. ಆಕೆ ಕೆಂಪು ರಂಗಿನ ಬಟ್ಟೆ ಹಾಕಿಕೊಂಡಿದ್ದಳು; ನಾನು ನನ್ನ ಆ ಚೆಲುವಿನ ರೇಶ್ಮೆ ಫ್ರಾಕನ್ನು ಹಾಕಿಕೊಂಡಿದ್ದೆ. ಆಕೆಯ ಗುರುತು ನನಗಿಲ್ಲ - ಅವಳು ಹೊಸಬಳು, ಬಂದು ಒಂದು ತಿಂಗಳಾಗಿದೆಯಷ್ಟೆ. ಕಳೆದ ತಿಂಗಳಲ್ಲಿ ಮಳೆ ತುಂಬಾ ಇತ್ತು ನೋಡು. ಅದೇ ನಾನು ಅವಳನ್ನು ಮೊದಲು ನೋಡಿರಲಿಲ್ಲ. ಆದರೂ ನೋಡಿದೊಡನೆಯೇ ಆಕೆ ಮರ್ಯಾದೆಯ ಹೆಂಗಸಲ್ಲವೆಂದು ನನಗನಿಸಿತು. ಮೊತ್ತ ಮೊದಲು, ನನ್ನಂತೆಯೇ ಅವಳು ಕಿಟಕಿಯ ಬಳಿ ಕೂತುಕೊಂಡದ್ದಕ್ಕಾಗಿ ನನಗೆ ಬೇಸರವಾಯಿತು. ಕಡೆ ಕಡೆಗೆ ಅವಳನ್ನು ನಿರೀಕ್ಷಿಸುತ್ತಾ ಕುಳಿತುಕೊಳ್ಳುವುದೂ ಒಂದು ಕೌತುಕದ ಕೆಲಸವೆಂದು ಕಂಡುಬಂತು. ಮುಂಗೈಯ ಮೇಲೆ ಗಲ್ಲವನ್ನೂರಿ, ಆಕೆ ಅತ್ತಿತ್ತ ಹೋಗುವ ಗಂಡಸರ ಮೇಲೆ ಕಣ್ಣು ಹಾಕುತ್ತಿದ್ದಳು. ಅವರೆಲ್ಲ ತಿರುಗಿ ಅವಳ ಮೇಲೆ ಕಣ್ಣು ಹಾಕುತ್ತಿದ್ದರು. ಆ ಮನೆಯ ಹತ್ತಿರ ಬಂದೊಡನೆ ಜನರಿಗೊಂದು ಸೂಟು ಸಿಕ್ಕುವಂತೆ ಭಾಸವಾಗುತ್ತಿತ್ತು. ನಾಯಿ ತನ್ನ ಕೊಳ್ಳೆಯನ್ನು ವಾಸನೆಯಿಂದಲೇ ಅರಿಯುವ ಹಾಗೆ ಅವರು ಅವಳ ಇರವನ್ನರಿಯುತ್ತಿದ್ದರೇನೊ! ಆ ಮನೆಯ ಎದುರು ಬಂದ ಕೂಡಲೆ ಫಕ್ಕನೆ ಅವರು ತಲೆಯೆತ್ತಿ ಮೇಲೆ ನೋಡಿ ಅವಳ ಕೂಡೆ ನೋಟಗಳನ್ನು ಬೆರಸುತ್ತಿದ್ದರು. 'ಬರುವುದಿಲ್ಲವೆ?' ಎಂದು ಕೇಳುತ್ತಿತ್ತವಳ ನೋಟ!

"ಅವರ ನೋಟಗಳ ಉತ್ತರ:

" 'ವೇಳೆ ಇಲ್ಲ', ಇಲ್ಲವೆ 'ಇನ್ನೊಂದು ದಿನ,' ಅಥವಾ 'ಹಣವಿಲ್ಲ' ಅಥವಾ 'ಹೋಗೇ ಆಚೆ, ಬಜಾರಿ!'

ಈ ಕೊನೆಯ ಉತ್ತರ ವಯಸ್ಸಾದ ಗಂಡಸರ ಸನ್ನೆಯ ಅರ್ಥ.

"ಎಷ್ಟೆಂದರೂ ಆಕೆ ತನ್ನ ಆ ದುರ್ವ್ಯಾಸಂಗವನ್ನು ಅಥವಾ ಉದ್ಯೋಗವನ್ನು ನಡೆಸುವ ರೀತಿಯ ಚೋದ್ಯವನ್ನು ನೀನು ಅರಿತುಕೊಳ್ಳಲಾರೆ."

"ಒಮ್ಮೊಮ್ಮೆ ಅವಳು ಫಕ್ಕನೆ ಕಿಟಕಿಯನ್ನು ಮುಚ್ಚಿ ಬಿಡುತ್ತಿದ್ದಳು. ನೋಡಿದರೆ ಒಬ್ಬ ಮನುಷ್ಯ ಆಕೆಯ ಬಾಗಿಲೊಳಗೆ ಹೊಗುತ್ತಿದ್ದ. ತನ್ನ

ಬೇಟೆಯನ್ನವಳು ಬೆಸ್ತನ ಹಾಗೆ ಹಿಡಿದುಬಿಟ್ಟಿದ್ದಳು. ಅವರಿಬ್ಬರೂ ಮನೆಯೊಳ
ಹತ್ತೋ ಇಪ್ಪತ್ತೋ ಮಿನಿಟುಗಳವರೆಗೆ ಮಾತ್ರ ಉಳಿದುಕೊಳ್ಳುತ್ತಿದ್ದರು. ಕಟ್ಟಕಡೆ
ಈ ಜೇಡರ ಹುಳುವನ್ನು ನೋಡಿ ನಾನೂ ಹುರಿದುಂಬುವ ಪರಿಸ್ಥಿತಿ ಬಂತು. ಮತ್ತ
ಆಕೆಯೇನೂ ಕುರೂಪಿಯಾಗಿದ್ದಿಲ್ಲ ನೋಡು.

"ನನಗೆ ಆಶ್ಚರ್ಯವಾಯಿತು. ತನ್ನ ಅಭಿಪ್ರಾಯವು ಅಷ್ಟು ಚೆನ್ನಾಗಿ
ಶೀಘ್ರವಾಗಿ, ಸಂಪೂರ್ಣವಾಗಿ ಅವರಿಗೆ ತಿಳಿಯುವಂತೆ ಅವಳು ಯಾವ ಚಮತ್ಕಾ
ಮಾಡುತ್ತಿದ್ದಾಳೆ? ದಿಟ್ಟಿಸುವುದೊಂದೇ ಅಲ್ಲದೆ ತಲೆಯಿಂದಲೋ, ಕೈಗಳಿಂದಲೋ
ಏನಾದರೂ ಸನ್ನೆ ಮಾಡುತ್ತಾಳೆಯೆ?

"ಇದರ ಮೂಲಶೋಧನೆ ಮಾಡಿ ಬಿಡಬೇಕೆಂದು ನನ್ನ ದೃಷ್ಟಿಚಕ್ರವನ್ನು
ಹಾಕಿಕೊಂಡೆ. ಓಹೊ! ಅದು ಬರೀ ಸುಲಭದ ಕೆಲಸ: ಮೊದಲೊಂದು
ಕುಡಿನೋಟ, ಮತ್ತೊಂದು ಕಿರುನಗು, ಕೊನೆಗೊಂದು ತಲೆಯ ಸಣ್ಣ ಓಲಾಟ
ಅದರರ್ಥ: 'ಮೇಲೆ ಬರುತ್ತೀರಾ?' ಆದರೆ ಅಷ್ಟು ಸೂಕ್ಷ್ಮದಿಂದ ಕೆಲಸ
ಮಾಡಬೇಕಾದರೆ ಬಲು ಚದುರೆ ಆಕೆ!

"ಮತ್ತೆ ನಾನೆಣಿಸಿದೆ. ಅಷ್ಟೇ ಚತುರತೆಯಿಂದ, ಆ ಸೂಕ್ಷ್ಮ ಸಂಜ್ಞೆಯನ್ನು
ನಾನೂ ಮಾಡಬಲ್ಲೆನೇ?

"ಕನ್ನಡಿಯ ಮುಂದೆ ನಿಂತು ಪ್ರಯತ್ನಿಸಿದೆ. ಅರೇ! ನಾನು ಅವಳಿಗಿಂತಲೂ
ಚುರುಕಾಗಿ ಚೆನ್ನಾಗಿ ಅದನ್ನು ನಡೆಸಬಲ್ಲೆ! ಪುನಃ ಹೋಗಿ ಕಿಟಕಿಯ ಬಳ
ಕುಳಿತುಕೊಂಡೆ.

"ಪಾಪ, ಆಕೆಗೆ ಈಗೀಗ ಯಾರೂ ಸಿಗುತ್ತಿದ್ದಿಲ್ಲ. ಆ ರೀತಿಯಲ್ಲಿ ತನ್ನ
ಜೀವನವನ್ನು ಗಳಿಸುವುದು ಬಹಳ ಕಷ್ಟದ ಕೆಲಸ. ಆದರೂ ಅದರಲ್ಲಿಯೂ
ಕೌತುಕವಿದೆ; ಬೀದಿಯಲ್ಲಿ ಹೋಗುತ್ತಿರುವವರಲ್ಲಿ ಕೆಲವರು ಅಷ್ಟೇನೂ ಹಾಳು
ಜನರಲ್ಲ ನೋಡು.

"ಈಗ ಸೂರ್ಯ ತಿರುಗಿದ್ದರಿಂದ ಜನರೆಲ್ಲ ನನ್ನ ಮನೆಯ ಪಕ್ಕದಲ್ಲಿ
ನಡೆಯುತ್ತಿದ್ದರು. ಅವಳ ಸಾಲಿನಲ್ಲಿ ಯಾರೂ ನಡೆಯುತ್ತಿದ್ದಿಲ್ಲ. ಯುವಕರು,
ಮುದುಕರು, ಕಪ್ಪಿನವರು, ಬೆಳ್ಳಗಿನವರು, ನರಗೂದಲಿನವರು, ಕೆಂಚುಗೂದಲಿನವರು

ಎಲ್ಲ ನನ್ನ ಮನೆಯ ಪಕ್ಕದಲ್ಲಿಯೇ ನಡೆಯುತ್ತಿದ್ದರು.

"ಅವರಲ್ಲಿ ಕೆಲವರು ನಿಜವಾಗಿಯೂ ಚೆಲುವರಿದ್ದರು; ಒಳ್ಳೇ ಚೆಲುವರು, ನನ್ನ ಅಥವಾ ನಿನ್ನ ಗಂಡನಿಗಿಂತಲೂ - ನಿನ್ನ ಮುಂಚಿನ ಗಂಡ ಈಗ ನೀನವನನ್ನು ಬಿಟ್ಟಿದಿಯೇ - ಎಷ್ಟೋ ಚೆಲುವರು.

"ನಾನು ನನ್ನಲ್ಲಿಯೇ ಅಂದುಕೊಂಡೆ - 'ನಾನು, ಗರತಿ ಹೆಂಗಸು, ಆ ಸೂಳೆಯ ಹಾಗೆಯೇ ಕಣ್ಸನ್ನೆ ಮಾಡಿದರೆ ಅವರಿಗೆ ಅರ್ಥವಾದೀತೆ?' ಕೂಡಲೆ ನನಗೆ ಒಂದು ಹುಚ್ಚು ಹಂಬಲವಾಯಿತು. ಅದೆಂಥಾ ಆಸೆಯೆನ್ನುತ್ತಿ! - ಹೆಂಗಸರಿಗೆ ಬಸಿರಿಯಾಗಿದ್ದಾಗ ಬಯಕೆಯಾಗುತ್ತದಲ್ಲ, ಅಂಥ ಅದಮ್ಯವಾದ ಒಂದು ಆಸೆಯಾಯಿತು. ಕಣ್ಸನ್ನೆ ಮಾಡಿಬಿಡಬೇಕೆಂದು. ನನಗೆ ಕೆಲವು ಸಲ ಅಂಥ ಬಯಕೆಗಳಾಗುವುದಿದೆ. ಅದು ಬರಿಯ ಹುಚ್ಚಿರಬಹುದು. ನಮ್ಮ ಹೆಂಗಸರ ಹೃದಯವೆಂದರೆ ಮಂಗಗಳ ಮನಸ್ಸಿನಂತೆಯೋ ಏನೋ ಅಮ್ಮಾ. ಹಾಗೆಂದೇ ಒಬ್ಬ ಡಾಕ್ಟರರು ನನ್ನೊಡನೆ ಅಂದಿದ್ದರು. ಯಾವಾಗಲೂ ಒಬ್ಬರನ್ನಲ್ಲ ಇನ್ನೊಬ್ಬರನ್ನು ಅನುಕರಿಸುತ್ತಲೇ ಇರುತ್ತೇವೆ. ಗಂಡಂದಿರನ್ನು ಪ್ರೀತಿಸುತ್ತಿರುವಷ್ಟು ದಿನ ಅಂದರೆ 'ಹನೀಮೂನ್'* ಸಮಯದಲ್ಲಿ ನಾವು ನಮ್ಮ ಗಂಡಂದಿರ ಅನುಕರಣ ಮಾಡುತ್ತಿರುತ್ತೇವೆ, ಅದಾದ ಮೇಲೆ ನಮ್ಮ ಪ್ರಣಯಿಗಳನ್ನು, ನಮ್ಮ ಗೆಳೆಯರನ್ನು, ನಮ್ಮ ಪಾದ್ರಿಗಳನ್ನು (ಅವರ ಮೇಲೆ ನಮಗೆ ಇಷ್ಟವಿದ್ದರೆ) ಅನುಕರಿಸುತ್ತೇವೆ. ಅವರ ವಿಚಾರಸರಣಿಯನ್ನು, ಅವರ ಮಾತಿನ ರೀತಿಯನ್ನು, ಅವರ ಶಬ್ದ - ಶಬ್ದಗಳನ್ನು, ಅವರ ಭಾವಭಂಗಿಗಳನ್ನು - ಎಲ್ಲವನ್ನೂ ಅನುಕರಿಸುತ್ತೇವೆ. ಅದೊಂದು ಹುಚ್ಚು.

"ಇರಲಿ, ಏನಾದರೂ ಮಾಡಬೇಕೆಂದು ಬಲವಂತವಾದ ಆಶೆಯುಂಟಾಯಿತೆಂದರೆ ಅದನ್ನು ಮಾಡಿಯೇ ಬಿಡುವುದು ನನ್ನ ಸ್ವಭಾವ.

"ಕೊನೆಗೆ ನಾನು ಅಂದುಕೊಂಡೆ, 'ಈಗ ಒಬ್ಬನ ಮೇಲೆ ನನ್ನ ವಿದ್ಯೆಯನ್ನು ಪ್ರಯೋಗಿಸಿ ನೋಡುತ್ತೇನೆ. ಅದರಿಂದ ಆಗುವುದೇನು ಮಣ್ಣು? ಒಂದು

*ಮದುವೆಯಾಗಿ ಒಂದು ತಿಂಗಳವರೆಗೆ ಗಂಡ ಹೆಂಡಿರು ವಿನೋದಕ್ಕಾಗಿ ಸಂಚರಿಸುತ್ತಿರುವ ಪದ್ಧತಿಗೆ 'ಹನೀಮೂನ್' ಎನ್ನುತ್ತಾರೆ.

ಮುಗುಳುನಗೆ ನಕ್ಕಾನು ಆತ, ನಾನೂ ನಕ್ಕೇನು, ಆ ಮೇಲೆ ನಾವು ಇನ್ನೊಮ್ಮೆ ಭೇಟಿ ಆಗುವುದುಂಟೇ? ಒಂದು ವೇಳೆ ಆದರೂ ನಮಗೆ ಗುರುತು ಸಿಗುವುದಿಲ್ಲ ಅವನಿಗೆ ಒಂದು ವೇಳೆ ಗುರುತು ಸಿಕ್ಕಿದರೂ ನಾನು ಒಪ್ಪಬೇಕಲ್ಲ!

"ಮತ್ತೆ ನಾನು ಆರಿಸಿಕೊಳ್ಳಹತ್ತಿದೆ. ನನಗೆ ನಿಜವಾಗಿಯೂ ಒಳ್ಳೆಯನೊಬ್ಬಾತ ಬೇಕಾಗಿದ್ದ. ಥಕ್ಕನೆ ಸುಂದರವಾದ ಅಜಾನುಬಾಹು ಯುವಕನೊಬ್ಬ ಬರುತ್ತಿರುವುದು ತೋರಿತು ಚೆಲುವರೆಂದರೆ ನನಗೆ ಬಹಳ ಇಷ್ಟ ನೋಡಮ್ಮ.

"ನಾನವನನ್ನು ನೋಡಿದೆ. ಮುಗುಳು ನಗು ಬೀರಿದೆ; ಅವನೂ ನಕ್ಕ. ಆಮೇಲೆ ನಾನು ಚಿಕ್ಕದೊಂದು ಭಂಗಿಯನ್ನು ತೋರಿಸಿದೆ... ಅವನು ತಲೆದೂಗಿದ. ಆಮೇಲೆ... ಆಮೇಲೆ... ಏನಾಯಿತು ಗೊತ್ತೇ?.... ಅವನು ನೆಟ್ಟಗೆ ಮನೆಯೊಳಗೆ ಬಂದ... ಎದುರು ಬಾಗಿಲಿನಿಂದ!

"ಆಗ ನನ್ನ ಪರಿಸ್ಥಿತಿ ಹೇಗಿರಬೇಕೆಂದು ನೀನೇ ಎಣಿಸಿಕೊ! ನನ್ನ ತಲೆ ತಿರುಗಿ ಹೋಗಿತ್ತೆಂದೆಣಿಸಿದೆ. ನನಗೆ ಆಗಿದ್ದ ಭಯವೊ! ಈಗ ಅವನು ನನ್ನ ಚಾಕರ ಜೋಸೇಫನೊಡನೆ ಮಾತಾಡುತ್ತಿರಬಹುದು. ಆತ ನನ್ನ ಗಂಡನ ಪ್ರೀತಿಪಾತ್ರ ಸೇವಕ; ಈ ಮನುಷ್ಯನಿಗೂ ನನಗೂ ಬಹಳ ದಿನದ ಸ್ನೇಹವೆಂದು ಅವ ನಂಬದೆ ಇರಲಿಕ್ಕಿಲ್ಲ.

"ಏನು ಮಾಡಲಿ, ಏನು ಹೇಳಲಿ, ಅಯ್ಯೋ ಏನು ಮಾಡಲಪ್ಪಾ? ಈಗಾಗಲೇ ಅವನು ಪ್ರವೇಶಕ್ಕಾಗಿ ಗಂಟೆ ಬಾರಿಸುತ್ತಿರಬಹುದು. ನನಗೆ ಏನೂ ತೋಚಲಿಲ್ಲ. ಕಡೆಗೆ ಕೂಡಲೇ ಹೊರಗೋಡಿ ಅವನ ಕೂಡೆ ಮಾತಾಡಿ, ಅವನು ತಪ್ಪು ತಿಳಿವಳಿಕೆಯಿಂದ ಅಲ್ಲಿಗೆ ಬಂದಿದ್ದಾನೆಂದೂ, ಹೊರಟು ಹೋಗಬೇಕೆಂದೂ ಬೇಡಿಕೊಳ್ಳುವುದೇ ಉತ್ತಮ ಉಪಾಯವೆಂದೆನಿಸಿತು. ನಿಜವಾಗಿ ನಿಸ್ಸಹಾಯ ಅಬಲೆಯೊಬ್ಬಳ ಮೇಲೆ ಕರುಣೆ ಹುಟ್ಟದೇ ಅವನಿಗೆ? ಓಡಿ ಹೋಗಿ ಬಾಗಿಲು ತೆರೆದೆ - ಆಗ ಅವನು ಗಂಟೆ ಬಾರಿಸಲು ಕೈ ನೀಡಿದ್ದನಷ್ಟೆ.

"ಬಹಳ ಗಾಬರಿಯಿಂದ ನಾನು ಒರಲಿದೆ - 'ಮಹಾಶಯ, ಹೊರಟು ಹೋಗಿ ನೀವು! ನೀವು ತಪ್ಪು ತಿಳಿವಳಿಕೆಯಿಂದ ಇಲ್ಲಿ ಬಂದಿದ್ದೀರಿ. ನಾನು ಗರತಿ

ಹೆಂಗಸು, ಮದುವೆಯಾದವಳು. ಅದೊಂದು ದೊಡ್ಡ ಭಯಂಕರ ತಪ್ಪು ಭಾವನೆಯಿಂದ ನಡೆದ ಸಂಗತಿ; ನಿಮ್ಮಂತೆಯೇ ಇರುವ ಒಬ್ಬ ಸ್ನೇಹಿತನೆಂದು ಭ್ರಮಿಸಿ ನಿಮ್ಮನ್ನು ಕರೆದದ್ದು. ಮಹಾಶಯ, ನನ್ನ ಮೇಲೆ ದಯೆ ಇಡಿರಿ.

"ಆ ಮೇಲೆ ಏನಾಯಿತೆನ್ನುತ್ತಿ - ಆತ ನಗುತ್ತಾ ಹೇಳಿದ 'ಒಳ್ಳೇದು ನನ್ನ ನಲ್ಲೆ, ನಿನ್ನ ಈ ಚಿಕ್ಕ ಕತೆಯೆಲ್ಲ ನನಗೆ ಗೊತ್ತು. ನಿನಗೆ ಮದುವೆಯಾಗಿದ್ದರೆ ಒಂದರ ಬದಲು ಎರಡು 'ಲುಯಿ' (ಹೆಚ್ಚು ಕಡಿಮೆ ಒಂದು ಪವನು) ಕೊಡುತ್ತೇನೆ. ನಡೆ, ಒಳಗೆ ಹೋಗೋಣ.'

"ಮತ್ತೆ ಆತ ನನ್ನನ್ನು ದೂಡಿಕೊಂಡು ಒಳಗೆ ಬಂದು ಬಾಗಿಲು ಹಾಕಿಕೊಂಡ. ನಾನು ಭಯದಿಂದ ನಡುಗುತ್ತಾ ಆತನ ಮುಂದೆ ನಿಂತಿದ್ದೆ. ನನಗೊಂದು ಮುತ್ತಿಟ್ಟು ಅವನು ನನ್ನನ್ನು ಕೈಗಳಿಂದ ಬಳಸಿ, ಬೈಠಕುಖಾನೆಗೆ ನನ್ನನ್ನು ಸೆಳೆದುಕೊಂಡು ನಡೆದ -ಅದರ ಬಾಗಿಲು ತೆರೆದಿತ್ತು.

"ಮತ್ತಾತ ತನ್ನ ಸುತ್ತಲೂ ನೋಡಿ ಆ ಸ್ಥಳವನ್ನು ಕ್ರಯಕ್ಕೆ ಪಡೆದುಕೊಳ್ಳುವವನಂತೆ - 'ಓಹೋ ಇದು ಒಳ್ಳೇ ಸುಂದರ ಸ್ಥಳ. ನೀನು ಈ ಕಿಟಕಿಯ ಮಾಟದ ಆಟವನ್ನು ಹೂಡಬೇಕಾದರೆ ಈಗ ಬಹಳ ಕಷ್ಟದಲ್ಲಿರಬೇಕು ಅಲ್ಲವೇ?" ಎಂದ.

"ನಾನು ಪುನಃ ಪ್ರಾರ್ಥಿಸಹತ್ತಿದೆ. 'ಹೊರಟುಹೋಗಿರಿ ಮಹಾಶಯ, ಹೋಗಿರಿ! ನನ್ನ ಮೇಲೆ ದಯೆಯಿಡಿ. ನನ್ನ ಗಂಡ ಈಗಲೇ ಬಂದಾರು! ಅವರು ಬರುವ ಹೊತ್ತಾಯಿತು. ನೀವು ತಪ್ಪು ತಿಳಿದುಕೊಂಡಿದ್ದೀರಿ, ದಮ್ಮಯ್ಯ!"

"ಅವನು ಶಾಂತನಾಗಿಯೆ ಇದ್ದ: 'ನೋಡು ನನ್ನ ಹುಡುಗೀ, ನಿನ್ನ ಈ ಹರಟೆಯೆಲ್ಲ ಸಾಕು. ನಿನ್ನ ಗಂಡ ಬರುವನೇ ಆದರೆ, ಅವನಿಗೆ ಐದು ಫ್ರಾಂಕು ಕೊಡುತ್ತೇನೆ. ಎಲ್ಲಾದರೂ ಹೋಗಿ ಒಂದು ಬಾಟ್ಲಿ ಕುಡಿದು ಬರಲಿ!" ಎಂದ.

"ಅವನು ಆ ಮೇಲೆ ರಾಹುಲನ (ಆಕೆಯ ಗಂಡ) ಫೋಟೋವನ್ನು ನೋಡಿ ಕೇಳಿದ :

" 'ಆತ.... ನಿನ್ನ.... ಗಂಡನೇ?'

" 'ಹೌದು, ಅವರೇ.'

".... ಬೆಪ್ಪನ ಹಾಗೆ ಕಾಣುತ್ತಾನೆ! ಆಗಲಿ, ಇದು ಯಾರು? ನಿನ್ನ ಗೆಳತಿ ಅಲ್ಲವೆ?"

"ಅದು ನಿನ್ನ ಚಿತ್ರ, ನೀನು ಸಾಯಂಕಾಲದ ಉಡಿಗೆ ಹಾಕಿಕೊಂಡು ತೆಗೆಸಿದ್ದು. ನನಗೆ ಏನು ಹೇಳುತ್ತೇನೆಂಬುದರ ಅರಿವೇ ಇರಲಿಲ್ಲ. ಅದೇ ಒರಲಿದೆ:

" 'ಹೌದು, ನನ್ನ ಗೆಳತಿಯದು.'

" ' ಅವಳು ಭಾರೀ ಚೆಲುವೆ. ಅವಳ ಪರಿಚಯ ಮಾಡಿಸಿ ಕೊಡುವಿಯಾ?'

"ಅಷ್ಟರಲ್ಲಿ ಗಂಟೆ ಐದು ಹೊಡೆಯಿತು. ರಾಹುಲ ಬರುವುದು ಐದೂವರೆ ಗಂಟೆಗೆ. ಈ ಮನುಷ್ಯ ಹೊರಟುಹೋಗುವ ಮುಂಚೆ ಆತ ಬಂದರೆ? ಯೋಚಿಸುತ್ತ ನನ್ನ ತಲೆ ತಿರುಗಿತು....ಯೋಚಿಸಿದೆ.... ಯೋಚಿಸಿದೆ..... ಆದಷ್ಟು ಬೇಗ ಈ ಮನುಷ್ಯನನ್ನು ಕಳಿಸದೆ ಗತ್ಯಂತರವಿಲ್ಲೆಂದು... ಎಷ್ಟು ಬೇಗ ಅದು ಮುಗಿಯಿತೋ... ಅಷ್ಟು ಒಳ್ಳೇದು... ಗೊತ್ತಾಯಿತಲ್ಲ...... ಅದು ಆಗಲೇಬೇಕಾಯಿತು..... ಅದು ಆಗದೆ... ಆತ.... ಹೋಗಲೊಪ್ಪಲಿಲ್ಲ... ಆದರಿಂದ ನಾನು... ನಾನು... ಬಾಗಿಲನ್ನು ಮುಚ್ಚಿ ಅಗಳಿ ಹಾಕಿದೆ ಮತ್ತೆ..... ಆತ..."

▲▲▲

ಮಾರ್ಕಿಸ್ ರೆನೆಡನ್ನಳು ಒಂದೇ ಸಮನೆ ನಗಹತ್ತಿದಳು. ತಡೆಯಲಾರದೆ ನಕ್ಕಳು. ತಲೆಗಿಂಬಿನಲ್ಲಿ ತಲೆಯನ್ನು ಮುಚ್ಚಿ ಇಡೀ ಮಂಚವೇ ಅಲುಗುವಂತೆ ನಕ್ಕಳು.

ಸ್ವಲ್ಪ ಶಾಂತವಾದ ಮೇಲೆ ಕೇಳಿದಳು -

"ಅಂತೂ... ಅಂತೂ...... ಆತ ಸುಂದರ ಯುವಕ" ಅಲ್ಲವೇ?

"ಹೌದು."

"ಆದರೂ ನಿನಗೆ ತೃಪ್ತಿಯಿಲ್ಲ?"

"ಹಾಗಲ್ಲ ನೋಡೆ... ಆದರೆ...ಆತ....... ನಾಳೆಯೂ ಬರುತ್ತೇನೆ ಎಂದಿದ್ದಾನೆ.. ಏನು ಮಾಡಲಿ?... ಅದೇ ಸಮಯಕ್ಕೆ.....ನನಗೆ ಹೆದರಿಕೆ

ಆಗುತ್ತದೆ.... ಅವನು ಎಂಥಾ ಹಟಮಾರಿಯೆಂದು ನಿನಗೆ ಗೊತ್ತಿಲ್ಲ... ಏನು ಮಾಡಲಿ?.."

ರೆನೆಡನಳು ಈ ಸಮಸ್ಯೆಯ ಕುರಿತು ಯೋಚಿಸಹತ್ತಿದಳು. ಕೊನೆಗೆ ನಿಶ್ಚಯದ ದನಿಯಿಂದ ಹೇಳಿದಳು.

"ಅವನನ್ನು ಕೈದು ಮಾಡಿಸು."

ಗ್ರೆಂಗೇರಿಗೆ ಸಿಡಿಲುಬಡಿದಂತಾಯಿತು.

"ಏನು? ಏನಂದಿ? ಏನು ಎಣಿಸುತ್ತಿದ್ದಿ? ಕೈದು ಮಾಡಿಸುವುದು ಯಾವ ನೆವದಿಂದ?"

"ಅದಕ್ಕೆಲ್ಲಾ ಸುಲಭವಿದೆ. ನೀನು ಪೋಲೀಸರಿಗೆ ತಿಳಿಸು. ಮೂರು ದಿನಗಳಿಂದ ಒಬ್ಬ ಮನುಷ್ಯ ನಿನ್ನ ಬೆನ್ನು ಹತ್ತಿದ್ದಾನೆಂದು, ನಿನ್ನೆ ಆವ ನಿನ್ನ ಮನೆಗೆ ಆಕ್ರಮ ಪ್ರವೇಶ ಮಾಡಿ ಈ ಹೊತ್ತು ಬರುತ್ತೇನೆಂದು ಹೆದರಿಕೆ ಹಾಕಿದ್ದಾನೆಂದು. ಅವರು ನಿನಗೆ ಇಬ್ಬರು ಕಾನ್‌ಸ್ಟೇಬಲರನ್ನು ಕೊಡುತ್ತಾರೆ. ಅವರು ಅವನನ್ನು ಕೈದು ಮಾಡುತ್ತಾರೆ."

"ಆದರೆ....... ಅವನೆಲ್ಲಿಯಾದರೂ ನಡೆದದ್ದನ್ನು ಹೇಳಿಬಿಟ್ಟರೆ..."

"ಅವನನ್ನು ಯಾರು ನಂಬುತ್ತಾರೆ? ನೀನು ಗರತಿ ಹೆಂಗಸು. ಸಂಶಯದಿಂದ ದೂರವಾದವಳು. ನಿನ್ನ ಕತೆಯನ್ನು ಮೊದಲೇ ಹೇಳಿಟ್ಟುಬಿಟ್ಟರೆ ತೀರಿತು."

"ನನಗೆ ಧೈರ್ಯ ಬಂದೀತೆ?"

"ಧೈರ್ಯ ಮಾಡಿಕೊಳ್ಳಬೇಕಪ್ಪ. ಇಲ್ಲದಿದ್ದರೆ ಸರ್ವನಾಶ."

"ಅವನು ನನ್ನ ಮರ್ಯಾದೆ ತೆಗೆದು ಮಾತಾಡಿಯಾನು, ಕೈದು ಮಾಡಿದರೆ...."

"ಸಾಕ್ಷಿಗಳಿದ್ದಾರೆ.... ಅವನಿಗೆ ದಂಡನೆ ವಿಧಿಸಬಹುದು."

"ಎಂಥಾ ದಂಡನೆ?"

"ನಿನಗೆ ಮಾನನಷ್ಟ ದ್ರವ್ಯವನ್ನು ತೆರಬೇಕೆಂದು. ಇಂಥಾ ಪ್ರಸಂಗಗಳಲ್ಲಿ

ನಿರ್ದಾಕ್ಷಿಣ್ಯವಾಗಿರಬೇಕಾಗುತ್ತದೆ."

"ಹಣದ ವಿಚಾರ ಹೇಳುವಾಗ ಮತ್ತೊಂದು ವಿಚಾರ ನೆನಪಾಯಿತು. ಅವ ಮೇಜಿನ ಮೇಲೆ ಎರಡು ಲುಯಿಗಳನ್ನು ಇಟ್ಟು, ಹೋಗಿದ್ದಾನೆ."

"ಎರಡು ಲುಯಿಗಳು?"

"ಹೌದು."

"ಅಷ್ಟೆ?"

"ಹಾಂ."

"ಅದೇನೂ ದೊಡ್ಡದಲ್ಲ. ನಾನಾದರೆ ನನ್ನ ಗೌರವಕ್ಕೆ ಕಡಿಮೆಯೆಂದು ಭಾವಿಸುತ್ತಿದ್ದೆ. ಇರಲಿ."

"ಆದರೆ....... ಆ ಹಣವನ್ನೇನು ಮಾಡಲಿ ನಾನು?"

ಮಾರ್ಕಿಸಳು ಒಂದು ನಿಮಿಷ ಅನುಮಾನಿಸಿ, ಕಡೆಗೆ ಗಂಭೀರವಾಗಿ ಹೇಳಿದಳು.

"ನೋಡು ನೀನು........ ನೀನು..........ಅದನ್ನು ನಿನ್ನ ಗಂಡನಿಗೆ ಒಂದು ಕಾಣಿಕೆಯಾಗಿ ಕೊಡಬೇಕು. ಅದು ಅವನಿಗದು ಸಲ್ಲತಕ್ಕದ್ದು ನ್ಯಾಯ."

❑

---

*(ಮಾಪಾಸಾರ Signal ಕಥೆಯ ಆಧಾರದಿಂದ)*

## ೫. ನಿರುದ್ಯೋಗಿ

ಮತ್ತೂ ಮತ್ತೂ ನನ್ನನ್ನೇ ನಾನು ಪುಸಲಾಯಿಸಿಕೊಳ್ಳುವ ಪ್ರಯತ್ನ ಮಾಡುತ್ತಿದ್ದೇನೆ -- ಅವನನ್ನು ನಾನು ಕೊಂದದ್ದಲ್ಲ; ಅವನ ಸಾವಿಗೆ ನಿಮಿತ್ತಮಾತ್ರನಾದೆ, ಅಷ್ಟೇ - ಎಂದು. ಆದರೆ ಪುನಃ ಪುನಃ ಅದೇ ಭ್ರಾಂತಿ ಬಂದು ಪೀಡಿಸುತ್ತದೆ. ನಾನು ಅವನನ್ನು ತಿದ್ದುವ ಗೊಡವೆಗೆ ಹೋಗಿರದಿದ್ದರೆ ಅವನು ಬದುಕಿ ಉಳಿಯುತ್ತಿದ್ದನೋ ಏನೊ, ಯಾರಿಗೆ ಗೊತ್ತು?

ಅವನೇನೋ ಹುಟ್ಟಾ ನಿರುದ್ಯೋಗಿ - ಅದರಲ್ಲಿ ನನಗೇನೂ ಸಂಶಯವಿಲ್ಲ. ಆದರೆ ಗ್ರಹಚಾರ ಕೆಟ್ಟ; ನನಗೇಕೆ ಬೇಕಿತ್ತು, ಅವನನ್ನು ಉದ್ಯೋಗಕ್ಕೆ ಹಚ್ಚುವ ಹವ್ಯಾಸ? ನೋಡಿ, ಅನೇಕ ಬಾರಿ ನಾವು ಮಾಡುವ ಕೆಲಸಗಳಿಗೆ ಉದ್ದೇಶವೊಂದು ಫಲವೊಂದು ಆಗಿಬಿಡುತ್ತದೆ. ಕಡೆಗೆ "ಮಾಡಿದ ಸೇವೆ ಅಪರಾಧಕ್ಕೆ ಸಾಲದು" ಎನ್ನುವ ಗಾದೆಗೆ ಸರಿಹೋಗುತ್ತದೆ, ನಮ್ಮ ಉಪಕಾರಗಳ ಪರಿಣಾಮ. ನನ್ನ ಅಧಿಕಪ್ರಸಂಗವೇ ನನ್ನ ಮನಸ್ಸಿನ ಕೊರತೆಗೆ ಬುಡ.

ಹೇಳಿದೆನಲ್ಲ, ಹುಟ್ಟಾ ನಿರುದ್ಯೋಗಿ ಆತ - ಎಂದು. ಬಾಲ್ಯದಲ್ಲಿ ಒಡನಾಡಿಯಾಗಿ, ಹುಡುಗತನದಲ್ಲಿ ಸಹಪಾಠಿಯಾಗಿ, ಕಡೆಗೆ ಅವನ ಕೊನೆಯ ದಿನಗಳಲ್ಲಿ ಬಂದೀಖಾನೆಯಲ್ಲಿ ಸಹಬಂದಿಯಾಗಿ ಅವನ ಜೀವನವನ್ನು ನಿರೀಕ್ಷಿಸಿದ್ದೇನೆ : ಅವನಲ್ಲಿ ಉದ್ಯಮದ ಬೀಜವೇ ಇರಲಿಲ್ಲ. ಬರಿಯ ಬೀದಿಬಸವತನ ಬೇರೂರಿತ್ತು.

ಶ್ರೀನಿವಾಸ ನಮ್ಮ ನೆರೆಮನೆಯ ಬಡ ವಿಧವೆ ಸೀತಮ್ಮನ ಮಗ. ಬಡವೆಯಾದರೂ ಕೈಕಾಲು ಗಟ್ಟಿಯಿದ್ದುದರಿಂದ, ಬೇರೆಯವರ ಮನೆಯ ಮುಸುರೆ

ತೊಳೆದಾದರೂ ಒಬ್ಬನೇ ಮಗನಾದ ಶೀನೂಗೆ ಏನೂ ಕಡಿಮೆ ಮಾಡುತ್ತಿದ್ದಿಲ್ಲ. ತನ್ನ ಮಗ ಒಬ್ಬರ ಹಾಗೆ ಆಗಬೇಕು. ಮನೆಮಾರು ಕಟ್ಟಬೇಕು, ಸಂಸಾರ ಹೂಡಬೇಕು; ತಾನು ಒದ್ದಾಡಿದರೂ ಚಿಂತೆಯಿಲ್ಲ; ಇದು ಹೆಂಗಸಿನ ಹಸಿ ಹಂಬಲ. ಈ ಹಂಬಲವನ್ನು ಹೊಂದುವುದಕ್ಕಾಗಿ ಆಕೆ ಬೆವರು ಹರಿಸಿದ ದುಡಿಮೆಯ ಹಣವನ್ನು ಮಗನ ವಿದ್ಯಾಭ್ಯಾಸಕ್ಕೆ ವಿನಿಯೋಗಿಸುತ್ತಿದ್ದರು; ತನ್ನ ಹೊಟ್ಟೆ ಹಸಿದಿದ್ದರೂ ಮಗನ ಗಂಟಲು ಒಣಗದ ಹಾಗೆ ನೋಡಿಕೊಳ್ಳುತ್ತಿದ್ದರು.

ಆತ್ಮಸಂತೋಷದಿಂದ ತಾಯಿ ಮಾಡಿದ ಈ ಎಲ್ಲ ತ್ಯಾಗಗಳ ಹಣ್ಣನ್ನುಂಡು ಶ್ರೀನಿವಾಸನ ದೇಹವೇನೋ ಬೆಳೆಯಿತು. ಬುದ್ಧಿಯೂ ಬೆಳೆದಿರಬಹುದು. ಆದರೆ ಸೀತಮ್ಮ ಯಾವ ಆಶೋತ್ತರಗಳ ಲಾಭಕ್ಕಾಗಿ ತನ್ನ ಸ್ವಸುಖವನ್ನು ಬಲಿದಾನ ಮಾಡಿದ್ದರೋ, ಅವುಗಳ ಪಡಿಯಚ್ಚಂತಿರುವ ನೆರಳು ಕೂಡ ಅವರ ಮಗನ ಸ್ವಭಾವದ ಮೇಲೆ ಬೀಳದೆ ಇದ್ದದ್ದು ಪರಮಾಶ್ಚರ್ಯ. ಯಾವುದೋ ಒಂದು ವಿಚಿತ್ರ ಗ್ರಹಗತಿಯಲ್ಲಿ ಅವನು ಭೂಮಿಯ ಮೇಲೆ ಬಿದ್ದಿರಬೇಕು. ಅದಲ್ಲದಿದ್ದರೆ ಅವನು ಆ ರೀತಿಯ ನಿರುದ್ಯೋಗಿಯಾಗಲು ಬೇರಾವ ಕಾರಣವನ್ನೂ ಹೇಳಲಾಗುವುದಿಲ್ಲ.

ಶಾಲೆಗೆ ಹೋಗುತ್ತಿದ್ದಾಗಿನ ಅವನ ರೀತಿನೀತಿಗಳು ನನಗಿನ್ನೂ ನೆನಪಿನಲ್ಲಿವೆ. ಸ್ವಚ್ಛತೆ - ಮಲಿನತೆ ಹೆಚ್ಚು ಕಡಿಮೆಗಳ ಅರಿವಾಗುವ ವಯಸ್ಸಾದ ಮೇಲೂ ಅವನಿಗೆ ಬಟ್ಟೆಬರೆಗಳ ಮಾಲಿನ್ಯದ ಕಡೆಗೆ ಲಕ್ಷ್ಯವೇ ಇದ್ದಿಲ್ಲ. ಎಂದಾದರೊಮ್ಮ ಶಾಲೆಯ ಶಿಕ್ಷಕರ ಗದರಿಕೆ, ಹುಡುಗರ ನಗೆ, ತಾಯ ಒತ್ತಾಸೆಗಳಿಂದ ವಸ್ತ್ರವೊಗೆಯುವುದರಲ್ಲಿ ತೊಡಗಿದರೂ ಒಂದೆರಡನ್ನು ಒಗೆದುಹಾಕುವ ಮೊದಲು ಅವನ ಒಡಹುಟ್ಟಿದ ಆ ಸೋಮಾರಿತನ ಬಂದು ಮುಸುಕುತ್ತಿತ್ತು. ಅದರಿಂದಾಗಿ ಉಳಿದ ವಸ್ತ್ರಗಳು ಸಾಬೂನು ಕಾಣದೇ ಹಾಗೇ ಹಿಂಡಿ ಆಸರಿಸಲ್ಪಡುತ್ತಿದ್ದವು.

ಪುಸ್ತಕಗಳನ್ನು ಮುಟ್ಟಿನೋಡುವ ಅಭ್ಯಾಸ ಇಲ್ಲದಿದ್ದರೂ ಯಾರ ಪುಣ್ಯದಿಂದಲೋ ಶಾಲೆಗೊಂದು ಸರಿಯಾಗಿ ಹೋಗುತ್ತಿದ್ದ. ಬಂದ ಮೇಲಲ್ಲವೆ? ಅವನಿಚ್ಛೆಯಿಲ್ಲದೇ ಕೆಲವೊಂದು ಪಾಠಗಳು ಅವನಿಗೆ ತಿಳಿದುಹೋಗುತ್ತಿದ್ದವು.

ಹೀಗಾಗಿ ಪ್ರತಿವರ್ಷವೂ ಕಷ್ಟದಿಂದಾದರೂ ತೇರ್ಗಡೆಯಾಗುತ್ತ ಹೋಗುತ್ತಿದ್ದ. ಹಾಗೇನೂ ಶೀನು ಮೆದುಳಿಲ್ಲದ ಮೊದ್ದು ಜಂತುವಾಗಿದ್ದಿಲ್ಲ.

ಪರೀಕ್ಷೆಗಳ ಸಮಯ ಮೊದಲು ಉತ್ತರಪತ್ರ (answer paper)ಗಳನ್ನು ಒಪ್ಪಿಸಿ ಹೋಗುವಾತ ಶೀನುವೇ. ಪ್ರಶ್ನೆಗಳ ಉತ್ತರ ಚೆನ್ನಾಗಿ ತಿಳಿದೇ ಇದ್ದರೂ ಬರೆದುಹಾಕುವುದಕ್ಕೆ ಚಪಲ ಬಿಡಬೇಕಲ್ಲ!

▲▲▲

ಮ್ಯಾಟ್ರಿಕ್ ಕ್ಲಾಸಿನವರೆಗೆ ಶೀನೂ ನಾನೂ ಒಂದೇ ಶಾಲೆಯಲ್ಲಿ ಒಂದೇ ಕ್ಲಾಸಿನಲ್ಲಿ ಕಲಿಯುತ್ತ ಇದ್ದೆವು. ಮ್ಯಾಟ್ರಿಕ್‌ನಲ್ಲಿ ಅವ -ನ್ಯಾಯವಾಗಿ -ಫೈಲಾದ. ನಾನು ಮೇಲೆ ಬಿದ್ದಿದ್ದರಿಂದ ಮಂಗಳೂರಿನಲ್ಲಿ ಬಿಡಾರಮಾಡಿ ಕಾಲೇಜಿಗೆ ಹೋಗಹತ್ತಿದೆ.

ಆಗಾಗ್ಗೆ ರಜೆ ದೊರೆತಾಗ ಮನೆಗೆ ಬಂದು ಹೋಗುತ್ತಿದ್ದೆ. ಆಗ ಶೀನೂನ ಸಮಾಚಾರ ತಿಳಿದುಬರುತ್ತಿತ್ತು. ಊರುಬಿಟ್ಟು, ಎಲ್ಲಿಯೋ ಹೊರಟುಹೋಗಿದ್ದನಂತೆ. ಒಂದು ಕಾಗದ ಕೂಡ ಬರೆಯುತ್ತಿದ್ದಿಲ್ಲವಂತೆ. ಸೀತಮ್ಮ ಕಣ್ಣೀರು ತುಂಬಿ ಮಗನ ಬುದ್ಧಿಯನ್ನು ಬಣ್ಣಿಸುತ್ತಿದ್ದರು, ನನ್ನ ಕೂಡೆ.

▲▲▲

ನಾನು ಮ್ಯಾಟ್ರಿಕ್ ಪಾಸಾದ ಮೇಲೆ ಮೊದಲನೆಯ ಬಾರಿ ಶೀನುವನ್ನು ಕಂಡದ್ದು ಸತ್ತರೂ ಮರೆತುಹೋಗದು. ಕಾಲೇಜು ಬಿಟ್ಟು ಕೆಲವು ದಿನಗಳಾಗಿದ್ದವು. ಕಾಂಗ್ರೆಸ್ ಸದಸ್ಯರನ್ನು ಸೇರಿಸುವುದಕ್ಕಾಗಿ ನಾನೊಂದು ಹಳ್ಳಿಯಲ್ಲಿ ಸಂಚಾರ ಮಾಡುತ್ತಿದ್ದೆ. ಮಧ್ಯಾಹ್ನದವರೆಗೆ ತಿರುತಿರುಗಿ ಕಪಾಲ ತಿರುಗಿ ಹೋಗಿತ್ತು. ಸ್ವಲ್ಪ ಶರಬತ್ತಾದರೂ ಕುಡಿಯೋಣ ಎಂತ ಆ ಹಳ್ಳಿಯ ಹೋಟೇಲಿಗೆ ಹೋದೆ. ಹೋಟೆಲಿನ ಬಾಗಿಲ ಹೊರಗೆ ಇರಿಸಿದ್ದ ಒಂದು ಮುರುಕು ಬೆಂಚಿನಮೇಲೆ ಒಡಕಲು ಮೈಯ, ಧೂಳು ತುಂಬಿ ಕೆಂಪಾಗಿ ಹೋಗಿದ್ದ ಬಟ್ಟೆಗಳ, ಎಣ್ಣೆಯ ಸೋಂಕಿಲ್ಲದೆ ಕೆಂಚುಗಟ್ಟಿ ಕೆದರಿ ಹಾರುತ್ತಿದ್ದ ಕೂದಲುಗಳ, ಮಲಿನ ಮುಖದ ಮೂರ್ತಿಯೊಂದು ನಿರ್ವೇದಭಾವದಿಂದ ಕುಳಿತಿತ್ತು. ನಾನು ಹೋಟೆಲಿನೊಳಗೆ ಹೋಗುವುದನ್ನು ನೋಡಲಿಕ್ಕೆ ಆ ಮೂರ್ತಿ ಕೊಂಚ ತಿರುಗಿತು. ಎಲ್ಲೋ ಕಂಡ

ಮುಖ. ಆದರೂ ಸ್ವಲ್ಪ ಹೊತ್ತು ಗುರುತೇ ಹತ್ತಲಿಲ್ಲ. ಕಡೆಗೆ ಅಂದಾಜುಮಾಡಿಕೊಂಡು ಕೇಳಿದೆ -

"ನೀನು.... ಶ್ರೀನಿವಾಸ, ಅಲ್ಲವೆ?"

ಶೀನು ಕೂತಲ್ಲಿಂದ ಕದಲದೆ ಒಣನಗೆಯೊಂದನ್ನು ನಕ್ಕ. ಅದು ಸಂಮತಿ ಸೂಚಕವೆಂದು ನೆನಸಿಕೊಂಡೆ.

"ಇಲ್ಲೇನು ಹೀಗೆ ಕೂತಿದ್ದೀ, ಶೀನು?"

"ಹೀಗೆಯೇ!" ಶಿನೂನ ಉದಾಶೀನ ಉತ್ತರ.

"ಊಟ ಆಗಿದೆಯೇ?"

ಅವನನ್ನು ಕಂಡರೆ ಮೂರುದಿನ ಅನ್ನ ಕಂಡಿಲ್ಲದಂತಿತ್ತು.

"ಇಲ್ಲ!"

"ಬಾ, ಒಂದು ಲೋಟ ಶರಬತ್ತು ಕುಡಿ, " ಹೋಟೆಲಿನೊಳಗೆ ಕಾಲಿಡುತ್ತಾ ಅವನನ್ನಾಮಂತ್ರಿಸಿದೆ.

ಶೀನು ತನ್ನ ಭದ್ರಾಸನದಿಂದ ಮೆಲ್ಲನೆದ್ದು ಒಳಗೆ ಬಂದು ಕುಳಿತ. ಶರಬತ್ತು ಕುಡಿಯುತ್ತಾ ವಿಚಾರಿಸಿದೆ :

'ಏನಪ್ಪಾ, ಎಲ್ಲಿದ್ದೀ ಈಗ, ಏನು ಮಾಡುತ್ತಿದ್ದಿ? ಬಹಳ ಸೊರಗಿಹೋಗಿದ್ದೀಯೆ, " ನಾನು ಸಹಜವಾದ ಸಹಾನುಭೂತಿಯಿಂದ ಕೇಳಿದೆ.

ಇಡೀ ಲೋಟವನ್ನು ಬಾಯೊಳಗೆ ಬಗ್ಗಿಸಿ ಒಂದೇ ಗುಟುಕಿಗೆ ಪಾನಕವನ್ನು ಆಪೋಶನೆ ಮಾಡಿ ಲೋಟವನ್ನು ಮೇಜಿನ ಮೇಲಿರಿಸುತ್ತಾ ಶೀನು ನುಡಿದ -

"ಹೀಗೇ ಇದ್ದೇನೆ ಸದ್ಯ!"

ಅವನ ಬಾಯಾರಿಕೆ ಹಿಂಗದ್ದು ನನಗೆ ತಿಳಿದು

"ಇನ್ನೊಂದು ಲೋಟ ಶರಬತ್ತು ಕೊಡಿಸಲೆ?"

"ಹೂಂ, ಇದ್ದರೆ ಕುಡಿಯುತ್ತಿದ್ದೆ."

ಇನ್ನೊಂದು ಲೋಟ ಶರಬತ್ತು ಕೊಡಿಸಿದೆ ನಾನು. ಶೀನು ಅದನ್ನು

ಕುಡಿದು ಸ್ವಲ್ಪ ಸಮಾಧಾನಪಟ್ಟನೆಂದು ತೋರಿತು.

"ಏನಪ್ಪಾ, ಊರಿಗೆ ಬರುತ್ತೀಯಾ? ಸಂಜೆಗೆ ನಾನು ಹೋಗುತ್ತಿದ್ದೇನೆ. ಬರುತ್ತೀಯಾದರೆ ನನ್ನ ಜತೆಗೆ ಬಾ," ಎಂದೆ.

"ಇಲ್ಲಪ್ಪಾ ಹೇಗೆ ಬರಲಿ? ಕೈಯಲ್ಲಿ ಕಾಸಿಲ್ಲ, ಹೇಗೆ ಬರಲಿ? ನೀನು ಬಸ್ಸಿನಲ್ಲಿ ಹೋಗುತ್ತಿರಬಹುದು. ಮಂಗಳೂರಿಂದ ಇಲ್ಲಿವರೆಗೆ ಹೇಗಾದರೂ ಕಾಲೆಳೆಯುತ್ತಾ ಬಂದೆ. ಇನ್ನು ಈ ಹೊತ್ತು ಮುಂದೆ ಸಾಗಲಾರೆ, ಎಲ್ಲಿಯಾದರೂ ಮರದಡಿ ಈ ರಾತ್ರಿ ಮಲಗಿ ನಾಳೆ ಬೆಳಿಗ್ಗೆ ಹೊರಡುತ್ತೇನೆ."

ತಾಯ ವಾತ್ಸಲ್ಯದ ಪರಿಪೋಷಣೆಯಿಂದ ಶೀನೂನ ಸ್ವಭಾವದಲ್ಲಿ ಯಾಚನೆಯ ಮತ್ತು ಪರಾಶ್ರಯದ ಕಲೆಯು ಬೆಳೆದಿರಲಿಲ್ಲ. ಮಾರುಪ್ಪದ ಮೈಯನ್ನು ಗೇಣುದ್ದ ಮಾಡಿ ಮಾತಾಡಲು ಅವನಿಂದಾಗುತ್ತಿರಲಿಲ್ಲ. ಅದರಿಂದಲೇ ಒತ್ತಾಯಪಡಿಸಿದೆ.

"ಪರವಾ ಇಲ್ಲ ಬಿಡು. ಬಸ್ಸಿನ ಕಾಸು ನಾನು ಕೊಡುತ್ತೇನೆ. ಸಿಕ್ಕಸಿಕ್ಕಲ್ಲಿ ಹೀಗೆ ಉಪವಾಸ ಅಲೆದು ಯಾವ ಸುಖ ಹೇಳು? ಬಾ"

"ಸುಖವೆಂದು ಅಲೆಯುತ್ತೇನೆಯೆ? ನನ್ನ ಪ್ರಾರಬ್ಧ ಹಾಗೆ. ಅದನ್ನೆಲ್ಲ ಮಾತಾಡಿ ಏನು ಫಲ?" ಕರುಣಾರ್ದ್ರವಾದ ಅಭಾವವೈರಾಗ್ಯದಿಂದ ಶೀನು ನನ್ನೊಡನೆ ಹೆಜ್ಜೆ ಹಾಕುತ್ತ ಮೆಲ್ಲನೆ ನುಡಿದ.

ಸ್ನೇಹಿತನೊಬ್ಬನಲ್ಲಿಗೆ ಅವನನ್ನು ಕರೆದುಕೊಂಡು ಹೋಗಿ ಮೀಯಿಸಿ ಊಟ ಮಾಡಿಸಿದೆ. ಊಟ ಮುಗಿದ ಮೇಲೆ ವಿಚಾರಿಸಿ ತಿಳಿದೆ, ಅವನ ಕತೆ.

ಮ್ಯಾಟ್ರಿಕ್‌ನಲ್ಲಿ ಫೈಲಾದ ಮೇಲೆ ಪುನಃ ಶಾಲೆಗೆ ಸೇರುವುದು ಅವನಿಗೆ ಸರ್ವಥಾ ಸೇರಲಿಲ್ಲ. ಊರಲ್ಲಿಯೇ ಕೆಲವು ದಿನ ಯಾತಯಾತ ಹಾಕುತ್ತಿದ್ದ. ಆದರೆ ಬಹಳ ದಿನ ಈ ಕಾರ್ಯಕ್ರಮವನ್ನು ಮುಂದುವರಿಸಲಾಗಲಿಲ್ಲ. ಯಾವ ರೀತಿಯಲ್ಲಿಯೂ ಊರಲ್ಲಿ ಪಥ ಸಾಗಲಾಗದೆ ಕಿವಿಯಲ್ಲಿದ್ದ ಒಂಟಿಯ ಜತೆಯನ್ನು - ಅವನ ದೇಹದಲ್ಲಿದ್ದ ಏಕಮಾತ್ರ ಸೊತ್ತನ್ನು - ಒತ್ತೆಯಿಟ್ಟು, ಪರವೂರಿಗೆ ಹೋಗಿಬಿಟ್ಟ. ಯಾವೂರಿಗೆ ಹೋದರೇನು? ಉದ್ಯೋಗ ಮಾಡಲಾರದ ಮನುಷ್ಯ

ಎಷ್ಟು ದಿನ ತಾನೇ ಜೀವನ ನಡೆಸಿಯಾನು? ಹುಬ್ಬಳ್ಳಿಯ ಹೋಟೆಲೊಂದರಲ್ಲಿ ಕೆಲಸಕ್ಕೆ ನಿಂತ. ಆದರೆ ದಿನಬೆಳಗಾದರೆ ಹನ್ನೆರಡು ಗಂಟೆ ಹಗಲು, ನಾಲ್ಕು ಗಂಟೆ ರಾತ್ರಿ ಒಂದೇ ರೀತಿ ಗಾಡಿಯೆತ್ತಿನ ಹಾಗೆ ದುಡಿಯುವುದು, ಎಂಟು ಗಂಟೆಯಾಗದೆ ಹಾಸಿಗೆ ಬಿಟ್ಟೇಳಲರಿಯದ ಶ್ರೀನಿವಾಸನಿಗೆ ಸಾಧ್ಯವೇ? ಅಲ್ಲಿಂದೊಂದು ದಿನ ಓಟ ಕಿತ್ತ. ಅವ್ವೂರು ಈವ್ವೂರೆನ್ನದೆ ಎಲ್ಲ ಕಡೆ ಅಲೆದ. ಬೊಂಬಾಯಿಗೂ ಹೋದ. ಅಲ್ಲಿ ನೂರಾರು ಆಫೀಸುಗಳಲ್ಲಿ ಕೆಲಸ ಮಾಡಿದ. ಎಲ್ಲಿಯೂ ಒಂದು ತಿಂಗಳಿಂದ ಹೆಚ್ಚು ನಿಲ್ಲುತ್ತಿರಲಿಲ್ಲ.

ಅವನ ಸಮಾಚಾರ ಕೇಳಿ ಕಡೆಗೆ ನಾನೆಂದೆ -"Rolling stone gathers no moss ಅಂತೆ! ಯಾವ ಕೆಲಸದಲ್ಲೂ ರುಚಿ ಕಂಡುಬರುವ ಮುಂಚೆ ನೀನು ಅದನ್ನು ಬಿಡುತ್ತಾ ಬಂದರೆ ಹೇಗೆ? ಕೆಲವು ದಿನ ಮನಸ್ಸನ್ನು ಬಿಗಿಹಿಡಿದು ಕೆಲಸ ಮಾಡಿದರೆ ಎಲ್ಲ ಸರಿಹೋಗುತ್ತಿತ್ತು."

"ಅದು ನನಗೂ ಗೊತ್ತು, ರಾಮೂ. ಚಿಕ್ಕಂದಿನಲ್ಲಿ ಶಾಲೆಗೆ ಹೋಗುತ್ತಿದ್ದಾಗಿನಿಂದ ಈಗ ನನ್ನ ಬುದ್ಧಿ ಬೆಳೆದಿದೆ. ಅನುಭವವೂ ಬೆಳೆದಿದೆ. ಕೆಲಸ ಮಾಡಲಾರದವ ಉಪವಾಸ ಬೀಳಬೇಕೆಂಬ ತತ್ವ ನನಗೂ ಮಂದಟ್ಟಾಗಿದೆ. ಏನು ಮಾಡಲಿ ಹೇಳು? ಶತಪ್ರಯತ್ನ ಮಾಡಿ ಸಹನೆಯನ್ನು ಅಭ್ಯಾಸ ಮಾಡಿದ್ದೇನೆ. ಒಂದು ಕೆಲಸ ನನಗೆ ಬೇಡವೆಂದು ಕಂಡಕೂಡಲೆ ಬಿಟ್ಟು, ಬೇಜವಾಬ್ದಾರಿಯಿಂದ ಹೊರಟುಹೋಗುವುದನ್ನೂ ಬಿಟ್ಟುಬಿಟ್ಟಿದ್ದೆ. ಇನ್ನೊಂದು ದಿನ ಇದೇ ಕೆಲಸ ಮಾಡಿದರೆ ಖಂಡಿತ ಹುಚ್ಚು ಹಿಡಿಯುತ್ತದೆಂದೆನಿಸುವವರೆಗೂ ಸಹಿಸಿದ್ದೇನೆ... ಈ ಹಸಿವೆ, ನೀರಡಿಕೆ, ಈ ಪರಾಶ್ರಯ, ಈ ಕಾಲುನಡಿಗೆ ಇದೆಲ್ಲ .... ಸುಖವಾಗುತ್ತದೆ ಎಂದು ತಿಳಿದಿದ್ದೀಯಾ? ನಾನು ಪಟ್ಟ ಪಾಡನ್ನು ನೆನೆಸಿಕೊಂಡರೆ, ಈವರೆಗೆ ಹೇಗೆ ಬದುಕಿದೆನೆಂದೇ ಆಶ್ಚರ್ಯವಾಗುತ್ತದೆ... ಎಷ್ಟ ಉಪವಾಸ, ಎಷ್ಟು ಪ್ರವಾಸ, ಎಂಥೆಂಥ ಅವಮಾನ... ಅಯ್ಯೋ..... ನನಗೆ ಯಾವ ಕೆಲಸ ಈ ಜಗತ್ತಿನಲ್ಲಿನ್ನೂ ಆಗಿಲ್ಲವೋ ಏನೋ ಶೀನೂ ಮರ್ಮಸ್ಪರ್ಶಿಯಾಗಿ ಕಣ್ಣೀರುತುಂಬಿದ.

ವಿದ್ಯಾರ್ಥಿ ಜೀವನದ ನಿಶ್ಚಿಂತ ಸೌಖ್ಯದ ಕಾಲದಲ್ಲಿ ಮನುಷ್ಯನ ವಿಚಿತ್ರಸ್ವಭಾವದ ಕುರಿತು ಚಿಂತಿಸುವ ಅರಿವಾಗಲಿ, ಇಚ್ಛೆಯಾಗಲಿ,

ವಿಚಾರಶಕ್ತಿಯಾಗಲಿ ನನಗಿಲ್ಲ. ಆದರೆ ನಿರುದ್ಯೋಗದ ಮೂರ್ತಸ್ವರೂಪವೇ ಆಗಿ ನನ್ನ ಮುಂದೆ ನಿಂತಾಗ, ಅವನನ್ನು ದಾರಿಗೆ ಹಚ್ಚುವುದು ಸಾಧ್ಯವೇ, ಅಲ್ಲವೇ ಯತ್ನಿಸೋಣವೆನಿಸಿತು. ಸಾಯಂಕಾಲ ಅವನನ್ನು ಊರಿಗೆ ಕರೆತಂದೆ.

ನನ್ನ ವಿಚಾರಧಾರೆ ಹೀಗೆ ಹರಿಯಿತು: ಶೀನು ಉದ್ಯೋಗಶತ್ರುವೇನೋ ನಿಜ. ಆದರೆ ನಾಲ್ಕಾರು ವರ್ಷ ದುಃಖಮಯ ಜೀವನದ ಕಟು - ಅನುಭವಗಳ ಉರಿಯಿಂದ ಕಾದು ಕೆಂಪೇರಿದ್ದ ಅವನ ಸ್ವಭಾವದ ಸಬಳ ಪ್ರಯತ್ನಪೂರ್ವಕವಾಗಿ ಬಗ್ಗಿಸಿದರೆ ಬಗ್ಗಿಸಲೂಬಹುದೆಂದು ಆಸೆಯಾಯಿತು. ಅದನ್ನು ಬಗ್ಗಿಸುವ ಹಟದಲ್ಲಿ ಸಬಳವೇ ಮುರಿದುಹೋದೀತೆಂಬ ಕಲ್ಪನೆ ನನಗಿರಲಿಲ್ಲ. "ಅದೃಷ್ಟೇನ ಹಿ ಯಚ್ಛಕ್ಯಂ ನ ತಚ್ಛಕ್ಯಂ ಕ್ರಮ್ಯೇ" ಎಂಬ ನಾಣ್ನುಡಿಯಲ್ಲಿ ನನಗೆ ನಂಬಿಗೆ ಇದ್ದಿಲ್ಲ. "ದೈವೇನ ದೇಯಮಿತಿ ಕಾಪುರುಷಾ ವದಂತಿ".

ಸರಿ, ನನ್ನ ಪ್ರಯೋಗಗಳಿಗಾರಂಭವಾಯಿತು. ನಾನು ಆರೆಂಟು ತಿಂಗಳುಗಳವರೆಗೆ ನಡೆಸಿದ ಎಲ್ಲ ಪ್ರಯತ್ನಗಳ ವಿವರವನ್ನಿಲ್ಲಿ ಕೊಟ್ಟರೆ ನಿಮಗೆ ತಲೆ ಸಿಡಿಯಬಹುದು. ಅಂತೂ ಇಷ್ಟು ಹೇಳಬಲ್ಲೆ - ಕಾಂಗ್ರೆಸ್ ಕೆಲಸದಿಂದ ಹಿಡಿದು ಬೇಸಾಯ ಕೆಲಸದವರೆಗಿನ ಎಲ್ಲ ವಿಧದ ಉದ್ಯೋಗಗಳನ್ನೂ ಅವನಿಗೆ ದೊರಕಿಸಿಕೊಟ್ಟು ನೋಡಿದೆ. ಎಲ್ಲ ಪ್ರಯೋಗಗಳ ಫಲವೂ ಒಂದೆ. ಪರಮಾವಧಿಯೆಂದರೆ ಒಂದು ತಿಂಗಳವರೆಗೆ ಸುಗಮವಾಗಿ ಕೆಲಸ ಸಾಗುತ್ತಿತ್ತು. ಮೇಲೆ ಪುನಃ ನಾಯಿಯ ಬಾಲ ಅಂಡೆಯಲ್ಲಿ ಹಾಕಿರಿಸಿದ್ದಂತೆ.

ಕೊನೆಗೆ ನನ್ನ ಸಹನೆಯೂ ಮೀರಿತು. ಅಂತಿಮ ಪ್ರಯತ್ನವೊಂದನ್ನು ಮಾಡಿ ಈ ಬೇಸರಗೇಡಿ ಕೆಲಸಕ್ಕೆ ತಿಲಾಂಜಲಿ ಕೊಡೋಣವೆಂದು ನಿರ್ಧರಿಸಿದೆ.

ನಾನು ಅವನನ್ನು ಜೈಲಿಗೆ ಕಳಿಸಿದೆ -ಹೌದು, ಗಾಬರಿಯಾಗಬೇಡಿ, ನಿಜವಾಗಿಯೂ ನಾನು ಅವನನ್ನು ಜೈಲಿಗೆ ಕಳಿಸಿದೆ. ಅದೇ ನನ್ನ ಕೊನೆಯ ಪ್ರಯತ್ನ. ಚಿಲ್ಲರೆ ಪ್ರಯೋಗಗಳನ್ನು ಮಾಡಿ ಫಲವಿಲ್ಲೆಂದು ನನಗೆ ಮನದಟ್ಟಾಯಿತು. ಅದಕ್ಕೇ ಈ ಮಹಾಪ್ರಯೋಗಕ್ಕಿಳಿದಿದ್ದು. ಕೆಲಸ ಮಾಡುವ ಅಥವಾ ಬಿಡುವ ಅಧಿಕಾರವನ್ನವನಿಗೇ ಕೊಟ್ಟರೆ ಕೆಲಸ ಸಾಗದು. ಹೆಚ್ಚು ಒತ್ತಾಯ ಮಾಡಿದರೆ ಊರುಬಿಟ್ಟು ಓಡುವುದೇ ಪರಿಣಾಮ; ಕಡಿಮೆಯೆಂದರೆ ಆರು

ತಿಂಗಳಾದರೂ ಒತ್ತಾಯದಿಂದ ಒಂದೇ ಕೆಲಸ ಮಾಡಿಸಿದರೆ ಮಾತ್ರ ಅವನ ಸ್ವಭಾವ
ಬದಲಾಯಿಸಬಹುದೆಂದೆನಿಸಿತು ನನಗೆ. ಸ್ವತಂತ್ರನಾಗಿದ್ದರೆ ಅವನಿಂದ ಕೆಲಸ
ಮಾಡಿಸುವ ಆಸೆಯೇ ಇರಲಿಲ್ಲ. ಅದಕ್ಕಾಗಿ ಯಾವುದೋ ನಡೆಯದ ಕಳವಿನ ಸುಳ್ಳು
ಆರೋಪವನ್ನು ಅವನ ತಲೆಯ ಮೇಲೆ ಹೊರಿಸಿ ಆರು ತಿಂಗಳು "ದೊಡ್ಡಮನೆ"ಯ
ಆತಿಥ್ಯಕ್ಕಾಗಿ ಕಳಿಸಿದೆ. ಇದೊಂದರ ಸುಳಿವೂ ಅವನಿಗೆ ಹತ್ತದಂತೆ ಎಚ್ಚರವಾಗಿದ್ದೆ.

ಅವನನ್ನು ಕನ್ನಾನೂರಿಗೆ ಕಳಿಸುವಂದು ನಾನೂ ಬೀಳ್ಕೊಡಲು ಹೋಗಿದ್ದೆ.
ಕಣ್ಣಲ್ಲಿ ಸಹಾನುಭೂತಿಯ ಕಂಬನಿಗಳು ತುಂಬಿರಲು, ಆರು ತಿಂಗಳ
ಬಂಧನವಾದರೂ ಜೀವನದಲ್ಲಿ ಇಚ್ಛಿಕವಾದ ಸ್ವಭಾವ ಪರಿವರ್ತನೆಯನ್ನುಂಟು
ಮಾಡಲೆಂದು ಬಯಸಿದೆ. ಪಾಪದ ಶೀನು! ನನ್ನ ಪಿತೂರಿಯ ಗಾಳಿಯಾದರೂ
ಅವನಿಗೆ ಹತ್ತಿರಲಿಲ್ಲ. ಅದೇ ನನ್ನ ಜೀವವನ್ನು ಕೊರೆಯುವ ಸಂಗತಿ.

▲▲▲

ಮುಂದೆ ಕೆಲವೇ ದಿನಗಳಲ್ಲಿ ದೇಶದಲ್ಲೆಲ್ಲಾ ಹಬ್ಬಿದ
ಸತ್ಯಾಗ್ರಹಾಂದೋಲನದಲ್ಲಿ ನಾನೂ ಹದಿಮೂರು ತಿಂಗಳ
ಸಜೆಯನ್ನನುಭವಿಸಬೇಕಾಗಿ ಬಂತು. ಅದೇ ಕನ್ನಾನೂರು ಜೇಲಿಗೆ ನಮ್ಮನ್ನೂ
ರವಾನಿಸಿದರು.

......ಶೀನು ಅಲ್ಲಿ ಕ್ರಿಮಿನಲ್ ಕೈದಿಯಾಗಿ ಜೀವನ ಸಾಗಿಸುತ್ತಿದ್ದ. ಅವನು
ಮಾಡದ ಅಪರಾಧಕ್ಕಾಗಿ ಶಿಕ್ಷೆ ಅನುಭವಿಸುತ್ತಿದ್ದ. ಕನ್ನಾನೂರಲ್ಲಿ ಮೊದಲ ಬಾರಿ
ಅವನನ್ನು ಕಾಣುವ ಸಂದರ್ಭ ಒದಗಿದಾಗಲೇ ನಾನು ಮಾಡಿದ ತಪ್ಪನ್ನು
ಕಂಡುಕೊಂಡೆ. ಆ ಅಮಾನುಷ "ಇಡ್ಲಿ" ಮತ್ತು 'ಪಚ್ಚೆಕರಿ'ಯ ಆಹಾರದಿಂದ
ಮೈಯಲ್ಲಿ ಯಾರಾದರೂ ಸೊರಗಿದರೆ ಅದಕ್ಕಾಗಿ ಆಶ್ಚರ್ಯಪಡಬೇಕಾಗಿಲ್ಲ.
ನ್ಯಾಯವಾಗಿ ಶೀನುವೂ ಸೊರಗಿದ್ದ. ಆದರೆ ನನ್ನ ಮನಸ್ಸಿಗೆ ನಾಟಿದ್ದು ಅದಲ್ಲ.
ಅವನ ಮುಖ, ಅವನ ನಿಸ್ತೇಜ ದೃಷ್ಟಿ. ಅವನು ಅಲ್ಲಿ ಇರತೊಡಗಿ ಎರಡೆ
ತಿಂಗಳಾಗಿದ್ದರೂ ಅಂಥ ಭಯಂಕರ ಪರಿವರ್ತನೆಯಾಗಿತ್ತು ಅವನ ಮುಖದಲ್ಲಿ.
ಜೀವನದಲ್ಲಿ ಇನ್ನೇನಾದರೂ ಬಯಕೆಯಿಲ್ಲವೆಂಬಂಥ ನಿರಾಶೆಯು ಮನೆಮಾಡಿತ್ತು
ಅವನ ಹಣೆಯ ಮೇಲೆ.

ಕೆಲವೇ ದಿನಗಳಲ್ಲಿ ಅವನೊಡನೆ ಮಾತನಾಡುವ ಅವಕಾಶವೂ ದೊರೆಯಿತು. ಅಂದಿನ ಸಂಭಾಷಣೆಯ ಪ್ರತಿ ಶಬ್ದವೂ ನನ್ನ ನೆನಪಿನಲ್ಲಿ ಅಚ್ಚಳಿಯದೆ ಹಾಗೇ ಉಳಿದಿದೆ. ಅವನು ನನ್ನ ಮುಂದೆ ನಿಂತು ಬಹಳ ಹೊತ್ತಿನವರೆಗೆ ಮೌನವನ್ನೊಡೆಯುವುದು ನನ್ನಿಂದಾಗಲಿಲ್ಲ.

"ಏನು ಶೀನು? ಹೇಗೆ ಸಾಗುತ್ತಿದೆ ಇಲ್ಲಿ ನಿನ್ನ ಜೀವನ?"

"ಸಾಗುತ್ತಿಲ್ಲ - ಎಳೆಯುತ್ತಿದೆ.... ಅಷ್ಟೆ... ನನ್ನ ಜೀವನದ ಮುಂದಾಳು ನಾನಲ್ಲ ಈಗ... ಈ ನನ್ನ ಭಾಗ್ಯವಿಧಾತರು.."

ಮುಂದೇನು ಹೇಳಬೇಕೆಂದು ನನಗೆ ತೋಚಲಿಲ್ಲ. ಸ್ವಲ್ಪ ಹೊತ್ತು ಯೋಚಿಸಿ ಒತ್ತಾಯದ ಆಶಾವಾದದಿಂದ ಹೇಳಿದೆ.

"ಮತ್ತೆ ಯಾವ ಕಷ್ಟಗಳೇ ಇರಲಿ.... ನಿನ್ನ ಸ್ವಭಾವ ಪರಿವರ್ತನೆಗೆ ಇದೊಂದು ಸುಸಂದರ್ಭ ಆರು ತಿಂಗಳ ದುಃಖಭೋಗದಿಂದ ನಿನ್ನ ಜೀವನದಲ್ಲಿ ಹೊಸಬೆಳಕು ಬರುವುದೆಂದು ನನ್ನ ಹೃದಯ ಹೇಳುತ್ತಿದೆ..."

ನಿಜವಾಗಿ ನನ್ನ ಹೃದಯ ಹಾಗೆ ಹೇಳುತ್ತಿರಲಿಲ್ಲ. ಅಲ್ಲಿ ಪಶ್ಚಾತ್ತಾಪದ ಜ್ವಾಲೆಯ ನಾಲಗೆಯೊಂದು ನೀಲಚ್ಛಾಯೆಯನ್ನು ಬೀರುತ್ತಿತ್ತಷ್ಟೆ!

"ನಿನ್ನ ಹೃದಯ ಹೇಳುತ್ತಿರಬಹುದು... ನನ್ನ ಹೃದಯ.... ಇಲ್ಲ.... ಅದು ಏನೂ ಹೇಳುತ್ತಿಲ್ಲ."

"ನಿರಾಶನಾಗಬೇಡ ಶೀನೂ... ಈ ದುಸ್ಸಂದರ್ಭದ ಒಳ್ಳೆಯ ಉಪಯೋಗ ಮಾಡಿಕೋ. ನಿನ್ನ ಸ್ವಭಾವ ತಿದ್ದಿಕೊ" ನನ್ನ ಉಪದೇಶವಿದು.

"ನಾನೇನು ತಿದ್ದಿಕೊಳ್ಳಲಿ... ಬ್ರಹ್ಮತಿದ್ದಿಕೊಂಡಾನು... ನಿಜವಾಗಿ ಇದು ಅವನಿಗೊಂದು ಸಂದರ್ಭ...."

"ಜೈಲಿನ ವಾತಾವರಣದಲ್ಲಿ ಒಂದು ಶಕ್ತಿಯಿದೆ. ಅದು ಹುಲಿಯನ್ನು ಇಲಿ ಮಾಡುವ ಶಕ್ತಿಯುಳ್ಳದ್ದು... ನೀನೇ ನೋಡು. ಜೈಲನ್ನು ಬಿಟ್ಟು ಹೋಗುವಂದು ನೀನು ಹೇಗೆ ಮಾರ್ಪಾಡು ಹೊಂದುತ್ತೀಯೆಂದು." ಇಲ್ಲದ ಸಂತೋಷವನ್ನು ತಂದುಕೊಂಡು ನಾನೆಂದೆ.

"ಈ ಜೈಲನ್ನು ನಾನು ಬಿಟ್ಟುಹೋಗುವ ಹಾಗಿಲ್ಲ ರಾಮೂ! ಇಲಿಯನ್ನು ಗೋಣಿಯೊಳಗೆ ಎಷ್ಟು ದಿನ ಹೊಲಿದಿಡಬಹುದು?"

▲▲▲

ಆ ಮೊದಲೇ ಜೈಲಿನ ಸುಖದುಃಖಗಳು ನನಗೆ ತಿಳಿದಿದ್ದರೆ ಶೀನುವಿನ ಮೇಲೆ ನಾನು ಈ ಪ್ರಯೋಗ ಮಾಡುತ್ತಿರಲಿಲ್ಲ. ಜೈಲು ಜೀವನ ಚರ್ವಿತ ಚರ್ವಣಕ್ಕೆ ಸರಿಯಾದದ್ದು ಬೇರೊಂದಿಲ್ಲ. ಪ್ರತಿದಿನವೂ ಒಂದೇ ರೀತಿ ಬೆಳಗಾಗುತ್ತದೆ. ಒಂದೇ ರೀತಿ ನಡೆಯುತ್ತದೆ. ಪುನಃ ಪುನಃ ಅವೇ ಮುಖಗಳ ದರ್ಶನವಾಗುತ್ತದೆ. ಮುಂಜಾನೆ ಏಳು ಹೊಡೆದೊಡನೆ ಎಲ್ಲ ಕೈದಿಗಳೂ ಬಟ್ಟಲು ತಂದಿಡಬೇಕು. ಒಂದೇ ಆಕಾರದ ಅಕ್ಕಿಯ "ಇಡ್ಲಿ", ಒಂದೇ ರೀತಿಯ ಹುಳು ಹುಳುಹುಪ್ಪಡಿ ಬೆರೆಸಿದ 'ಪಚ್ಚೆಕರಿ' ಬಂದು ಬೀಳುತ್ತದೆ. ಸಂಜೆಯಾಗುತ್ತಲೇ ಕೈದಿಗಳನ್ನು ಕೋಣೆ ಸೇರಿಸಿ ಬೀಗ ಹಾಕುತ್ತಾರೆ.

ಹೋಟೆಲಿನ ಜೀವನವನ್ನು ಸೈರಿಸಲಾರದಿದ್ದ ಶೀನು ಹೇಗೆ ತನ್ನ ಸ್ವಭಾವವನ್ನು ಜೈಲು ಜೀವನಕ್ಕೆ ಹೊಂದಿಸಿಕೊಂಡಾನು? ಅವನ ಸಂಕಟ ಬಾಯಲ್ಲಿ ಹೇಳಬರುವಂಥದಲ್ಲ.

▲▲▲

ಶೀನೂನನ್ನು ಹಗ್ಗ ಹೊಸೆಯುವ ಕೆಲಸಕ್ಕೆ ಹಾಕಿದ್ದರು. ಅವನ ಅದೃಷ್ಟಕ್ಕೇ ಅಂಥಾ ಕೆಲಸ ಸಿಕ್ಕಿತೋ ಏನೋ. ನಾವು ರಾಜಕೀಯ ಕೈದಿಗಳು "ಅರಸನ ಅತಿಥಿಗಳು ಕೆಲಸ ಮಾಡುವ ಪಾಡಿಲ್ಲ. ಕ್ರಿಮಿನಲ್ ಕೈದಿಗಳು ಮೈಮುರಿದು ದುಡಿಯಬೇಕು - ದುಡಿಯಲೇ ಬೇಕು. ದುಡಿಯದಿರಲೂ ಸಾಧ್ಯವಿಲ್ಲ. ಬೇಡವೆಂದರೆ ಬಿಟ್ಟುಹೋಗಲಾಸ್ಪದವಿಲ್ಲ. ಹೀಗೆ ಈ ಅನಿವಾರ್ಯ ಉದ್ಯೋಗ ಶೀನೂನ ಅನಂತ ಚಿಂತೆಗೆ ಮೂಲ.

ಅಪರಾಧಿಗಳನ್ನು ದಂಡಿಸುವ ಉದ್ದೇಶದ ನಮ್ಮ ಜೈಲುಗಳಲ್ಲಿ ಕೈದಿಗಳ ಮಾನಸಿಕ ಭಾವನೆಗಳ ಕುರಿತು ಯಾರು ಲಕ್ಷಿಸುತ್ತಾರೆ? ಬೆಳಿಗ್ಗೆ ಏಳುವುದರಿಂದ ತೊಡಗಿ ಸಂಜೆ ಲಾಕಪ್ಪಿಗೆ ಸೇರುವವರೆಗೆ ಎಲ್ಲ ಯಂತ್ರದಂತೆ ...ತಪ್ಪದೆ ಆಗಬೇಕು. ಊಟ ಮಾಡಬೇಕು - ಮಾಡಲೇಬೇಕು, ಕೆಲಸ ಮಾಡಬೇಕು- ಮಾಡಲೇ ಬೇಕು.

ಅದು ಜೈಲಿನ ಶಿಸ್ತು. ಈ ಶಿಸ್ತೇ ಶೀನೂನ ಬಾಳಿನ ಬೀಳನ್ನು ಹರಿದುಹಾಕಿತು.

▲▲▲

ಒಂದು ದಿನ ಬೆಳಿಗ್ಗೆ ಕೈದಿಗಳ ಕೋಣೆಯ ಬೀಗ ತೆಗೆಯುವ ಹೊತ್ತಿಗೆ ಗಲಭೆಯೆದ್ದಿತು. ವಿಚಾರಿಸುವಾಗ ಕೈದಿ ನಂ. ೬೧೫ ಶ್ರೀನಿವಾಸರಾವ್ ಆತ್ಮಹತ್ಯೆ ಮಾಡಿಕೊಂಡಿದ್ದು ತಿಳಿದುಬಂತು. ನನಗೆ ಸಿಡಿಲು ಬಡಿದ ಹಾಗಾಯಿತು.

ಕನ್ನಾನೂರಿನಲ್ಲಿ ಕೈದಿಗಳು ಮಲಗುವುದಕ್ಕೆ ಹಗ್ಗದ ಚಾಪೆ. ಶೀನೂ ಆ ಚಾಪೆಯನ್ನು ಬಿಡಿಸಿ ಕಣ್ಣಿಹೊಸೆದು ಜೈಲಿನ ಕಿಟಕಿಯಿಂದ ಅದನ್ನೆ ನೇತುಹಾಕಿಕೊಂಡಿದ್ದ. ಎಂಥ ಭಯಾನಕ ದೃಶ್ಯ.

ನೆಲದ ಮೇಲಿನ ಧೂಳನ್ನು ಬೆರಳಿಂದೆತ್ತಿ ಬಿಳಿಗೋಡೆಯ ಮೇಲೆ ಬರೆದಿದ್ದ-

"ಉದ್ಯೋಗವಿಲ್ಲದೆ ಜೀವನ ಸಾಗಿಸಲು ಈ ಜಗತ್ತಿನಲ್ಲಿ ಸಾಧ್ಯವಿಲ್ಲ. ಉದ್ಯಮದೊಡನೆ ಜೀವನವನ್ನೆಳೆಯಲು ನನ್ನಿಂದಾಗದು. ಅದಕ್ಕಾಗಿ ಈ ಉದ್ಯೋಗ ಮಾಡಿದೆ. ಯಾರೂ ಮರುಗಬೇಕಾಗಿಲ್ಲ."

ಶಾಲೆಯಲ್ಲಿ ಕಲಿತ ಬರೆಹ, ಜೈಲಿನಲ್ಲಿ ಕಲಿತ... ಇವು ಅವನ ಕೊನೆಯ ಕಾಲಕ್ಕೆ ಹೀಗೆ ಉಪಯೋಗಕ್ಕೆ ಬಂದವು. ನಿರಂತರವಾದ ಉದ್ಯೋಗವು ಅವನನ್ನು ಈ ರೀತಿಯ ಮೃತ್ಯುವಿಗೆ ಬಲಿಗೊಟ್ಟಿತು.

▲▲▲

ಈಗ ಹೇಳಿ, ನನ್ನ ಅಪರಾಧಕ್ಕೇನು ಶಿಕ್ಷೆ?

❑

## ೬. ಹಿಂದೂ-ಮುಸ್ಲಿಮ್

ಇಡೀ ನಗರದಲ್ಲಿ ಒಂದು ತರದ ಕಳವಳವು ಹಬ್ಬಿದಂತಿತ್ತು. ಜನರು ಒಬ್ಬರನ್ನೊಬ್ಬರು ಸಂದೇಹ ದೃಷ್ಟಿಯಿಂದ ಕಾಣುತ್ತಿದ್ದರು. ಹಿಂದು ಮುಸಲ್ಮಾನರು, ಪರಸ್ಪರ ವಕ್ರ ದೃಷ್ಟಿಯಿಂದ ಕಂಡು, ಕಣ್ಣು ಕೆಂಪಗೆ ಮಾಡುತ್ತಿದ್ದರು. ಕೆಲವರು ಕಣ್ಣು ತಪ್ಪಿಸಿಕೊಂಡು ಅತ್ತಿತ್ತ ತಿರುಗಾಡುತ್ತಿದ್ದರು. ಎಲ್ಲವೂ ಪ್ರಳಯದ ಬರವನ್ನು ಕಾಯುತ್ತಿರುವ ಅಸಹ್ಯ ಶಾಂತಿಯಂತೆ ತಣ್ಣಗಿತ್ತು.

ಆದರೆ ಹೀಗೇಕೆ? ಯಾರಿಗೂ ಈ ಪ್ರಶ್ನೆಯ ಉತ್ತರ ತಿಳಿದಂತಿರಲಿಲ್ಲ. ಸತ್ಯ ಹೇಳುವುದಾದರೆ, ಯಾರಿಗೂ ಇದರ ಮೂಲ ಶೋಧನೆ ಮಾಡುವ ಗೊಡವೆಯಿರುವಂತೆ ಕಾಣಲಿಲ್ಲ. ಆದರೂ ತಳಮಳವಂತೂ ಇದ್ದೇ ಇತ್ತು. ಅದನ್ನು ಅಲ್ಲಗಳೆಯಲಾಗುವುದಿಲ್ಲ. ಅಲ್ಲಲ್ಲಿ, ನಾಲ್ಕಾರು ಜನರ ಗುಂಪುಗಳು ನಿಂತು, ಒಳದನಿಯಲ್ಲಿ, ಯಾವುದೋ ಅಭೇದ್ಯ ಸಂಗತಿಯನ್ನು ಚರ್ಚಿಸುವಂತಿದ್ದುವು. ಪ್ರತಿಯೊಬ್ಬನೂ, ಒಂದೆರಡು ದಿನಗಳೊಳಗೆ, ಭಯಂಕರ ಹಿಂದೂ ಮುಸ್ಲಿಂ ದಂಗೆಯನ್ನು ನಿರೀಕ್ಷಿಸುತ್ತಿದ್ದ. ಮಾತ್ರ ಯಾರಿಗೂ ಅದನ್ನು ತಡೆಯಬೇಕೆಂದು ಹೊಳೆದಿರಲಿಲ್ಲ.

ಮುಸಲ್ಮಾನರ ಸಂಖ್ಯೆ ಹೆಚ್ಚಿರುವ ಗಲ್ಲಿಗಳಲ್ಲಿ ವಿಚಿತ್ರ ರೀತಿಯ ಪ್ರಚಾರಗಳು ನಡೆಯುತ್ತಿದ್ದವು. ನೂರಾರು ಕಥೆಗಳು ಹಬ್ಬಿದ್ದವು. ಕೆಲವರಿಗೆ ವರ್ತಮಾನವಾಗಿತ್ತು, ಏನೆಂದರೆ ಮೊಹರಂ ಹಬ್ಬದ ಮೆರವಣಿಗೆ ಹೊರಟು ಹಿಂದೂ ಗಲ್ಲಿಗಳಿಗೆ ಬಂದಾಗ, ಕಲ್ಲುಗಳನ್ನು ಬಿಸುಡಲಿರುವರೆಂದು. ಇನ್ನು ಕೆಲವರ

ಅಭಿಪ್ರಾಯವಿತ್ತು, ಏನೆಂದರೆ ಹನುಮಾನ್ ಗಲ್ಲಿಯ ತುದಿಯಲ್ಲಿರುವ ವಿಶಾಲವಾದ ಖಾಲಿ ಕಟ್ಟೋಣದಲ್ಲಿ ದೊಡ್ಡ ದೊಡ್ಡ ಬೆಣಚುಕಲ್ಲುಗಳ ಸಂಗ್ರಹವಾಗುತ್ತಿದೆ. ಸಾವಿರಾರು ಲಾರಿಗಳನ್ನು ಅಲ್ಲಿ ಒಟ್ಟಿಗಿಟ್ಟಿದ್ದಾರೆ. ಮೊಹರಂ ಮೆರವಣಿಗೆ ಅತ್ತ ತಿರುಗಿದ ಕೂಡಲೆ, ಮುಸಲ್ಮಾನರನ್ನು ಬಡಿಯುವರು. ಮತ್ತೆ ಕೆಲವರಿಗೆ ತಿಳಿದಂತೆ, ಮೊಹರಂ ದಿನ ದೊಡ್ಡದೊಂದು ಹಂದಿಯನ್ನು ಕೊಂದು, ಮೆರವಣಿಗೆಯ ಮೇಲೆ ಬಿಸುಡುವ ತೈಯಾರಿಗಳನ್ನು ಹಿಂದುಗಳು ನಡೆಸುತ್ತಿರುವರು ಇತ್ಯಾದಿ. ಇದರ ಸತ್ಯಾಸತ್ಯತೆಗಳನ್ನು ಶೋಧಿಸುವ ಅಗತ್ಯ ಒಬ್ಬನಿಗೂ ಇರಲಿಲ್ಲ.

ಇನ್ನು ಹಿಂದೂ ಬೀದಿಗಳಲ್ಲೇನೂ ವಾರ್ತೆಗಳು ಕಡಿಮೆಯಿರಲಿಲ್ಲ. ಮೊಹರಂ ನೆವನದಿಂದ ಗೋವಧೆಮಾಡಿ, ಹಿಂದೂ ಹನುಮಾನ್ ದೇವಾಲಯದ ಮುಂದೆ, ಅದರ ರುಂಡವನ್ನು ಕೆಡವಲಿರುವರೆಂದು ಕೆಲವರ ಅಂಬೋಣ. ದೇವಾಲಯದ ಕೆರೆಯಲ್ಲಿ, ಗೋಮಾಂಸವನ್ನು ರಾತ್ರಿಕಾಲದಲ್ಲಿ ಚೆಲ್ಲಿ, ಹಿಂದುಗಳ ಜಾತಿಭ್ರಷ್ಟ ಮಾಡುವರೆಂದು ಕೆಲವರ ಗುಣುಗಾಟ. ಮಶೀದಿಯ ಕಂಪೌಂಡಿನಲ್ಲಿ ಕಲ್ಲು ಕಟ್ಟಿಗೆಗಳನ್ನು ಒಟ್ಟಿಟ್ಟಿದ್ದಾರೆ. ಇದರಲ್ಲೇನೋ ಗೂಢವಿದೆಯೆಂದು ಇನ್ನುಳಿದವರ ಅಭಿಮತ.

ಮತ್ತೆ ಮುಸಲ್ಮಾನರ ಅತ್ಯಾಚಾರಗಳ ಕುರಿತು ಬೇರೆ ಪ್ರಚಾರ ನಡೆಯುತ್ತಿತ್ತು. ಶಂಕರಕೃಷ್ಣ ಜೋಯಿಸರ ಮಗಳನ್ನು ಮುಸಲ್ಮಾನ ಪುಂಡರು ಹಾರಿಸಿಕೊಂಡು ಹೋಗಿದ್ದರೆಂದೂ, ಬಲಾತ್ಕಾರದಿಂದ ಅವಳನ್ನು ಜಾತಿಗೆಡೆಸಿದರೆಂದೂ ದಟ್ಟವಾದ ಸುದ್ದಿ ಹಬ್ಬಿತ್ತು. ಸತ್ಯವಾಗಿ ನೋಡಿದರೆ, ಮೀನಾಕ್ಷಿ, ಮುಸಲ್ಮಾನನೊಂದಿಗೇ ಅಲ್ಲ, ಕರುಣೆ, ಆಶೆ ತೋರಿಸುವ ಯಾವ ಮತದವನ ಕೂಡೆಯೂ ಹೊರಟುಹೋಗಲು ಸಿದ್ಧಳೇ ಆದಂಥ ಅಬಲೆ ವಿಧವೆ. ಏನೋ, ಕರ್ಮಧರ್ಮ ಸಂಯೋಗದಿಂದ, ಮುಸಲ್ಮಾನನೊಬ್ಬ ಆಕೆಗೆ ಗಂಟುಬಿದ್ದ. ಅದರ ವಿಷಯ ಕೋರ್ಟಿಗೆ ದೂರು ಹೋಗಿ, ಆಕೆ, ಸ್ವೇಚ್ಛೆಯಿಂದ ಮಹಮದ್ ಕರೀಮನೊಡನೆ ತಾನು ಬಂದಿರುವೆನೆಂದು ಹೇಳಿಯೂ ಇದ್ದಳು. ಆದರೆ ಜಾತೀಯತೆಯ ಬೆಂಕಿಯನ್ನು ಹಬ್ಬುವ ಮೂಢ ಬೇಜವಾಬ್ದಾರರಿಗೆ ಇದೊಂದೂ ಬೇಕಿದ್ದಿಲ್ಲ. ಪರಸ್ಪರ ದ್ವೇಷ ಭಾವವನ್ನು ಹಬ್ಬಿಸುವುದೆಂದರೆ ಅವರಿಗೆ ಲೀಲೆ.

ಇತ್ತ ದೋಸ್ತ್ ಮಹಮ್ಮದರ ಮಗಳು ಉನ್ನೀಸಾ, ಮೂರು ದಿನಗಳಿಂದ ಕಾಣೆಯಾಗಿದ್ದಳು. ಕರೀಂಖಾನನ ಮೇಲಿನ ಸೇಡನ್ನು ತೀರಿಸಿಕೊಳ್ಳುವುದಕ್ಕಾಗಿ, ಹಿಂದುಗಳೇ ಅವಳನ್ನು ಕದ್ದುಕೊಂಡು ಹೋಗಿದ್ದಾರೆಂಬ ಶಂಕೆಯನ್ನು ಮುಸಲ್ಮಾನ ಪುಂಡರು ಹಬ್ಬಿದ್ದರು. ಇದರಿಂದ ಅಭಿಮಾನಿಗಳಾದ ಮುಸಲ್ಮಾನರಿಗೆ ಒಳ್ಳೇ ಅವಮಾನವಾಗಿತ್ತು. ಇದರ ಸೇಡನ್ನು ಖಂಡಿತವಾಗಿ ತೀರಿಸಿಯೇ ಬಿಡಬೇಕೆಂಬ ಹಠ ಅವರೆದೆಯಲ್ಲಿ ಬೇರೂರಿತ್ತು.

***

ನಗರದಲ್ಲೆಲ್ಲಾ ಈ ರೀತಿಯ ವಾರ್ತೆ-ಪ್ರತಿವಾರ್ತೆಗಳು ಗಾಳಿಯನ್ನು ಹೊಗೆಯಂತೆ ಮುತ್ತಿರುವಾಗ, ನಗರದ ಹೊರಗಿನ ಹಾಳು ಮನೆಯಲ್ಲಿ ಬೇರೆಯೇ ದೃಶ್ಯವೊಂದು ನಡೆಯುತ್ತಿತ್ತು. ನಗರದೊಳಗೆ ಹಗೆತನದ ಹುರುಪು ಸೂಳೈಸುತ್ತಿತ್ತು. ಅಲ್ಲಿ ಹಿಂದೂ-ಮುಸಲ್ಮಾನರು ವಕ್ರದೃಷ್ಟಿ, ರಕ್ತ ದೃಷ್ಟಿಗಳನ್ನು ಬೀರುತ್ತಿದ್ದರೆ, ಈ ಹಾಳುಮನೆಯಲ್ಲಿ ಮೂವರು ಮುಸಲ್ಮಾನರೂ, ಮೂವರು ಹಿಂದೂಗಳೂ ಸೇರಿ ಗಹನವಾದ ಆಲೋಚನೆಯಲ್ಲಿ ಮಗ್ನರಾಗಿದ್ದರು.

ಮೊತ್ತಮೊದಲು ನಿಮ್ಮನ್ನು ಆಕರ್ಷಿಸುವ ವ್ಯಕ್ತಿಯೆಂದರೆ, ಮುಸಲ್ಮಾನರ ಜಾತೀಯ ಭಾವನೆಯನ್ನು ಹೊಡೆದೆಬ್ಬಿಸಿ, ನಾಡಿದ್ದು ದಂಗೆಯಾಗುವ ಪ್ರಸಂಗದಲ್ಲಿ ಮುಸಲ್ಮಾನರ ಧುರೀಣತ್ವವನ್ನು ವಹಿಸಲಿದ್ದ ಜನಾಬ್ ರಹಿಮತುಲ್ಲಾ ಖಾನರು. ಉಳಿದ ಇಬ್ಬರು ಮುಸಲ್ಮಾನರು ಅವರ ಸಂಗಾತಿಗಳು.

ನಿಮಗೆ ವಿಚಿತ್ರವಾಗಿ ತೋರಬಹುದು. ಆದರೆ, ಅಲ್ಲಿ ಸೇರಿದ ಹಿಂದೂಗಳ ಮುಖ್ಯಸ್ಥನೆಂದರೆ, ದಂಗೆಯಾದರೆ ಹಿಂದುಗಳನ್ನು ಹುರಿದುಂಬಿಸಿ ಹೊಡೆದಾಡಿಸುವ ಸೇನಾಪತಿ, ಕೃಷ್ಣಶೆಟ್ಟರು.

ಪ್ರಾಯಶಃ ನೀವೆಣಿಸುತ್ತಿದ್ದಿರಿ. ಅವರು ಈ ದಂಗೆಯನ್ನು ನಿಲ್ಲಿಸುವ ಪ್ರಯತ್ನ ಮಾಡುವುದಕ್ಕಾಗಿ ಇಲ್ಲಿ ಸಭೆ ಸೇರಿದ್ದಾರೆಂದು. ಆದರೆ ರಹಿಮತುಲ್ಲಾರು ಹೇಳುತ್ತಿದ್ದರು, "ನನಗೆ, ಶೆಟ್ಟರೇ ಈ ಸಂಗತಿಯಿಂದ ಮುಖ್ಯ ಬೇಕಾದದ್ದೊಂದು. ಉನ್ನೀಸಾಳು ನನ್ನವಳಾಗಬೇಕು. ಅದು ಮೊದಲು. ಅದಕ್ಕಾಗಿ ನಾನು ಇಷ್ಟೆಲ್ಲ ಒದ್ದಾಡುತ್ತಿದ್ದೇನೆ.... ನಾನು ಹಣಕ್ಕೆ ಅಷ್ಟು ಬಾಯ್ಬಿಡುವುದಿಲ್ಲ."

"ಸಾಹೇಬರೇ, ನಿಮ್ಮ ಉನ್ನೀಸಾ ನಿಮಗೆ ಸಿಗಲಿಕ್ಕೆ ನಮ್ಮ ಆಕ್ಷೇಪವೇನೂ ಇಲ್ಲ. ನಮಗೆ, ಮುಖ್ಯ, ದೊರಕುವ ಹಣದಲ್ಲಿ ನಿಮಗೆಷ್ಟು ನಮಗೆಷ್ಟು ಎಂದು ನಿರ್ಣಯವಾಗಬೇಕು.....' ಕೃಷ್ಣಶೆಟ್ಟರ ಮಾತು.

"ಆ ಮುದುಕ ಶೇಟನಲ್ಲಿ ಒಟ್ಟು ಏಳು ಸಾವಿರ ರೂಪಾಯಿ ನಗದಿ ಉಂಟು ಅಂತ ರಜಕ್ ಹೇಳುತ್ತಾನೆ. ನನಗೆ ಅದರಲ್ಲಿ ಒಂದು ಪೈ ಕೂಡಾ ಬೇಡ. ಆದರೆ ರಜಕ್, ಅಬ್ದುಲ್ಲಾ ಇವರಿಗೆ ನೀವು ಒಂದೊಂದು ಸಾವಿರದಂತೆ ಕೊಡಬೇಕು....ಉಳಿದದ್ದು ಎಷ್ಟೇ ಇರಲಿ, ಅದು ನಿಮಗೇ......"

ಕೆಲಕಾಲ ಇದೇ ವಿಷಯ ಚರ್ಚೆ ನಡೆದು, ಹಣದ ಒಂದು ನಿರ್ಣಯವಾಯಿತು. ಕೊನೆಗೆ ರಹಿಮತುಲ್ಲರು, ಸಂಕ್ಷಿಪ್ತವಾಗಿ, ಹೀಗೆ ಕಾರ್ಯಕ್ರಮವನ್ನು ಪುನರಾವರ್ತಿಸಿದರು.

'ಮೊಹರಂ ದಿನ ಸಂಜೆ, ರಹಿಮತುಲ್ಲಾಖಾನರ ತಮ್ಮ ಸೈಯದ್ ಹನುಮಂತ ದೇವಸ್ಥಾನದ ಬಳಿ ಹೋಗುತ್ತಿರಬೇಕು. ಆಗ ಕೃಷ್ಣಶೆಟ್ಟರು, ತಮ್ಮ ಕೆಲಸದವನನ್ನು ಅವರೆದುರು ಕಳುಹಿಸಬೇಕು. ಅವನು ಸೈಯದರನ್ನು ನೋಡಿ, ನೆಲಕ್ಕೆ 'ಥೂ' ಎಂದುಗುಳಬೇಕು.ಆಮೇಲೆ ಜಗಳವೆಬ್ಬಿಸಿಕೊಂಡು ಹೊಡೆದಾಡಿಸಿಕೊಳ್ಳಬೇಕು. ಕೂಡಲೆ ಅದಕ್ಕೆ ಹಿಂದೂ -ಮುಸಲ್ಮಾನ ರೂಪ ಕೊಡಲ್ಪಡಬೇಕು. ಇದಿಷ್ಟಾದರೆ, ಉಳಿದದ್ದು ತನ್ನಂತೆಯೇ ನಡೆಯುತ್ತದೆ. ಹೊಡೆದಾಟ ಬಡಿದಾಟಗಳು ಹೆಚ್ಚಾದಾಗ, ಹಿಂದೂ ಗಲ್ಲಿಯಲ್ಲಿರುವ ಸೇಟ್ ಅಮಾನುಲ್ಲಾರ ಮನೆಯ ಮೇಲೆ ಕಲ್ಲುಗಳನ್ನು ನಮ್ಮ ಕಡೆಯವರು ಹೊಡೆದು, ಹಿಂದುಗಳ ಮೇಲೆ ಹಾಕಬೇಕು, ಮುದುಕ ಸೇಟರು ಗಡಿಬಿಡಿಯಲ್ಲಿರುವಾಗ, ರಜಕ್ ಅವರನ್ನು ಕೊಂದುಹಾಕಬೇಕು. ಗಲಾಟೆಯಲ್ಲಿ ತಪ್ಪು ಹಿಂದುಗಳ ಮೇಲೆ ಹೊರಿಸಲ್ಪಡುತ್ತದೆ. ಇದಾಗಿ, ಅವರ ಕೈಯಲ್ಲಿ ನಗದಾಗಿರುವ ಏಳುಸಾವಿರ ರೂಪಾಯಿಯನ್ನು ದರೋಡೆ ಮಾಡಿ, ನಾವು ಈಗ ಹೇಳಿದ ಕಡೆ ಹೂತಿಡಬೇಕು. ಇಷ್ಟು ಹಣದ ವಿಚಾರ.

ಇತ್ತ, ಶೆಟ್ಟರ ಜನರು, ಈಗ ಹೇಳಿದ ಹುಡುಗಿಯೊಂದನ್ನು ಕಡಿದು, ಗುರುತು ಸಿಕ್ಕದ ಹಾಗೆ ಮಾಡಬೇಕು. ನಾನು, ಅವಳೇ ಉನ್ನೀಸಾ, ಹಿಂದೂಗಳು ಕೊಂದರು ಎಂಬುದನ್ನು ಅವಳ ತಂದೆಯ ತಲೆಗೆ ಹೊಗಿಸುತ್ತೇನೆ.... ಎಲ್ಲಾ

ಶಾಂತವಾದ ಮೇಲೆ, ನಾನು ಮೆಲ್ಲನೆ ಊರು ಬಿಟ್ಟು ಅಲಹಾಬಾದಿಗೆ ಹೋಗಿ, ಉನ್ನೀಸಾಳನ್ನು ಮದುವೆಯಾಗುತ್ತೇನೆ.....' ಇತ್ಯಾದಿ, ಇತ್ಯಾದಿ.

ಮೊಹರಂನಂದು ಬೆಳಗಿನಿಂದಲೂ ವಿಶೇಷವಾದ ತಳಮಳವು ಹರಡಿತ್ತು. ರಹಿಮತುಲ್ಲಾರ ಯೋಜನೆಯು ಜಾರಿಗೆ ಬರಲು ಅರ್ಧವೇ ಗಂಟೆ ಉಳಿದಿತ್ತಷ್ಟೆ.

ಮುಸಲ್ಮಾನರ ಕೇರಿಯಲ್ಲಿ ಭಯಂಕರವಾದ ಕೋಲಾಹಲವೆದ್ದಿತು. ಸಾಯದುಲ್ಲಾ ಸಾಹೇಬರ ಮನೆಗೆ ಬೆಂಕಿ ಬಿದ್ದಿತ್ತು. ಹಟ್ಟಿಯ ಅಟ್ಟದಲ್ಲಿ ಒಟ್ಟಿದ್ದ ಒಣ ಹುಲ್ಲಿಗೆ ಬೆಂಕಿ ಹತ್ತಿದ್ದರಿಂದ, ಮುಂದೆ ಬೆಂಕಿಯನ್ನು ಸುಲಭದಲ್ಲಿ ಆರಿಸುವುದಾಗಲಿಲ್ಲ. ಧಗೆಯೆದ್ದು ಬೆಂಕಿ ಉರಿದು ಆಕಾಶಕ್ಕೆ ಮುತ್ತಿಡುತ್ತಿತ್ತು. ಮನೆಯವರೆಲ್ಲ ಹೊರಗೋಡಿ ಬಂದು ಆಕ್ರೋಶ ಮಾಡುತ್ತಿದ್ದರು.

"ನನ್ನ ಮಗುವನ್ನು ಹೇಗಾದರೂ ಬದುಕಿಸಿರಪ್ಪಾ" ಎಂದು ಸಾಯದುಲ್ಲಾರ ಬೀಬಿ ಬೊಬ್ಬಿಡುತ್ತಿದ್ದಳು. "ತೊಟ್ಟಿಲೊಳಗೆ ಮಲಗಿದೆ, ಯಾರಾದರೂ ಉಳಿಸಿರಪ್ಪಾ!"

ಎಲ್ಲರೂ ಕರುಣೆಯಿಂದ ನೋಡುತ್ತಿದ್ದರು. ಯಾರಿಗೂ, ಒಳಗೆ ಹೋಗಿ, ಮಗುವನ್ನು ಬದುಕಿಸುವ ಧೈರ್ಯ ಬರಲಿಲ್ಲ. ಬೆಂಕಿ ಹೊರಬಾಗಿಲ ಸುತ್ತಲೂ ಚಾಚಿತ್ತು. ಪರರವರ ಜೀವವುಳಿಸಲು ತಮ್ಮ ಜೀವವನ್ನು ಬಲಿಗೊಡುವವರಾರು?

ಬೆಂಕಿಯ ತಾಪ ಹೆಚ್ಚಿದಂತೆ, ಹೆಂಗಸಿನ ಬೊಬ್ಬೆಯೂ ಹೆಚ್ಚುತ್ತಿತ್ತು. ಸಮಾಧಾನ ಪಡಿಸುವವರೇ ಹೊರತು, ಯಾರೂ ಮಗುವನ್ನುಳಿಸಲೆಳಸಲಿಲ್ಲ. ಆ ಸರ್ವಂಭಕ್ಷಿ ನೋಡುತ್ತ ನಿಂತಿದ್ದ ತರುಣನೊಬ್ಬ. ಹೆಂಗಸಿನ ಕರುಣ ರೋದನವನ್ನು ಕೇಳಿ, ಅವನ ಹೃದಯ ತುಂಬಿ ಬಂತೋ ಏನೋ. ತನ್ನ ಕೋಟನ್ನೂ, ಶರ್ಟನ್ನೂ ಕಳಚಿ ಒಗೆದು, ಅವನು, ಒಮ್ಮೆಂದೊಮ್ಮೆ ಉರಿಯುವ ಕಡೆಗೆ ಧಾವಿಸಿದ. ಎಲ್ಲರೂ ಬೇಡ ಬೇಡವೆಂದೊದರುತ್ತಿದ್ದರು. ತರುಣ ಕಿವಿಗೊಡದೆ, ಬಾಗಿಲನ್ನಾವರಿಸಿದ ಜ್ವಾಲೆಯ ಮಧ್ಯದಿಂದ, ಅಂಬಿನಂತೆ ಒಳ ಜಾರಿದನು. ಇಡಿಯ ಪ್ರೇಕ್ಷಕ ವೃಂದವೇ ಬೊಟ್ಟು ಕಚ್ಚಿ, ಎವೆಯಿಕ್ಕದೆ ನಿಂತು ನೋಡುತ್ತಿತ್ತು. ಎಲ್ಲರೂ ಹುಚ್ಚ ಹಿಂದೂ ತರುಣ, ಜೀವಕ್ಕೆ ಎರವಾಗುತ್ತಾನೆಂದೇ ಭಾವಿಸಿದರು.

ಒಂದೇ ನಿಮಿಷ. ಹಿಂದೂ ತರುಣ, ಮಗುವನ್ನು ಎದೆಗಪಚಿಕೊಂಡು, ಜ್ವಾಲೆಯ ಮಧ್ಯದಿಂದ ಪುನಃ ಕಾಣಸಿಕೊಂಡ. ಭಯಂಕರವಾದೊಂದು ಮರದ ತುಂಡು, ಕೆಂಡ ಕೆಂಡವಾಗಿ ಕೆಳಗುರುಳುತ್ತಿತ್ತು. ಯುವಕ ಸ್ವಲ್ಪವೂ ಅಳುಕಲಿಲ್ಲ. ಒಂದೇ ಹಾರಿಗೆ ಬಾಗಿಲನ್ನು ದಾಟಿ ಹೊರಗೆ ಬಂದ. ಒಂದು ಸೆಕೆಂಡಿನಲ್ಲಿ ಆ ಜ್ವಾಲಾಮಯ ಖಂಡ ಕೆಳಗುರುಳಿತು.

ಯುವಕ ಮಗುವನ್ನು ತಂದು ತಾಯಿಯ ಕೈಲಿರಿಸಿದ. ಅವನ ಮೈಯೆಲ್ಲ ಜ್ವಾಲೆ ಹೊಡೆದು ಸುಟ್ಟುಹೋಗಿತ್ತು. ಪ್ರೇಕ್ಷಕರೆಲ್ಲ ಸೈ ಸೈಯೆಂದರು.

ಸಾಯದುಲ್ಲಾ ಖಾನರು ಕಣ್ಣೀರು ತುಂಬಿ ಹೇಳಿದರು, "ಸ್ವಾಮೀ. ನಾನು.... ಹುಟ್ಟಿಸಿದ ತಂದೆ, ಇವಳು ಹೆತ್ತ ತಾಯಿ - ನಾವೆಲ್ಲ ಸುಟ್ಟು ಹೋಗುತ್ತಿರುವ ಮಗುವಿಗಾಗಿ ಅಳುತ್ತಾ, ಅರಚುತ್ತಾ ಏನನ್ನೂ ಮಾಡಲಾರದೆ ಜೀವದಾಶೆಯಿಂದಿರುವಾಗ, ನೀವು ಬೇರೆ ಜಾತಿಯವರಾಗಿ ನಮ್ಮ ಮಗುವನ್ನು ಬದುಕಿಸಿದಿರಿ. ನಿಮ್ಮ ಜೀವವನ್ನು ಲೆಕ್ಕಿಸಲಿಲ್ಲ..... ನಾನು ಜೀವನದಲ್ಲೆಲ್ಲಾ ನಿಮ್ಮ ಚಾಕರಿ ಮಾಡಿದರೂ ಈ ಋಣ ಪರಿಹಾರವಾಗದು."

ಅಷ್ಟರೊಳಗೆ ಯುವಕ ಮೂರ್ಛಿತನಾಗಿದ್ದ. ಬಹಳ ಉಪಚರಿಸಿದ ಮೇಲೆ ಕಣ್ಣು ತೆರೆದ.

***

ಈ ಒಂದು ಘಟನೆಯಿಂದ, ಹಿಂದೂ ಮುಸಲ್ಮಾನರಲ್ಲಿದ್ದ ಭಯಂಕರ ವೈಮನಸ್ಯವು, ಒಂದೇ ನಿಮಿಷದಲ್ಲಿ ತಣ್ಣಗಾಯಿತು. ತಿಂಗಳುಗಟ್ಟಲೆಯಿಂದ ಉರಿಯುತ್ತಿದ್ದ ದ್ವೇಷವು, ತ್ಯಾಗ ತಣ್ಣೀರಿನಿಂದ ನಂದಿಹೋಯಿತು.

ರಹಿಮತುಲ್ಲಾರ ತಮ್ಮ ಕೃಷ್ಣಶೆಟ್ಟರ ಕೆಲಸದವನಿಗೆ ನಿಗದಿತ ಸಮಯಕ್ಕೆ ಸರಿಯಾಗಿ ಹೊಡೆಯಲೂ ಹೊಡೆದ. ಆದರೆ ಯಾವ ದಂಗೆಯೆಬ್ಬಿಸಲೂ ಆ ಹೊಡೆತಕ್ಕೆ ಸಾಧ್ಯವಾಗಲಿಲ್ಲ. ಬದಲಾಗಿ ಮುಸಲ್ಮಾನರೇ ರಹಿಮತುಲ್ಲಾರ ತಮ್ಮನನ್ನು, "ತಿಂದು ಬೆಳೆದಿದ್ದೀ, ಕೋಣನ ಹಾಗೆ, ಬೆಂಕಿಯಲ್ಲಿ ಮಗು ಸುಟ್ಟು ಹೋಗುತ್ತಿದ್ದಾಗ ಎಲ್ಲಿ ಹೋಗಿದ್ದಿ" ಎಂದು ಬೈದು, ಹೊಡೆದು ಭಂಗಿಸಿದರು.

(1940)

ಪಾ. ವೆಂ. ಆಚಾರ್ಯ

## ೭. ವಿನೋದದ ಪರಮಾವಧಿ

"ಫ -ಪ್ಪ -ಪ್ಪ -ಪ್ಪ -ಪ್ಪ-"

ನಾವೆಲ್ಲ ಕೈತಟ್ಟಿದೆವು.

"ಹಾಂ, ಎಲೆ ಹೊರಗಿಟ್ಟಿತು,*" ರಮೇಶ ಮಧ್ಯದಲ್ಲಿ ಬಾಯಿ ಹಾಕಿದ.

"ಹಾಗಾದರೆ ಇನ್ನು ಶ್ರಾದ್ಧ ಮುಗಿದ ಹಾಗೆಯೇ 'ಪಿಂಡಾನುದ್ವಾಸಯಿಷ್ಯೇ" ಆದರೆ ಸರಿ, " ನಾನು ಸೇರಿಸಿದೆ.

"ಸಂಜೀವ,- ಒಟ್ಟಿಗೆ ನೀನು ಕಾಫಿ ಕೊಟ್ಟಿದ್ದಕ್ಕೆ ನಿನಗೆ ಪಿಂಡ ಹಾಕಿದರು ರಮೇಶ, ನಾಣಿ ಕೂಡಿ, " ರಾಮು ಪಿಟೀಲ್ ಬಾರಿಸಿದ.

"ಪಾಪ, ಮೊನ್ನೆ ತಾನೇ ಮದುವೆಯಾಗಿದ್ದಾನೆ. ಇರಲಿ, ಹೆಂಡತಿ ಇನ್ನೂ ಚಿಕ್ಕವಳು," ನಂದು ಗಂಭೀರತೆಯ ಸೋಗಿನಲ್ಲಿ ಹೇಳಿದ.

ಎಲ್ಲರೂ ನಕ್ಕೆವು.

ಪುನಃ ರಮೇಶ ಸುರು ಮಾಡಿದ : "ಹೆಂಡತಿ ಸಣ್ಣವಳು ಅಂತ ಬೇಜಾರು ಮಾಡಿಕೋ ಬೇಡ, ಸಂಜೀವ. ನಿನಗೆ ಪುರುಸೊತ್ತಿದ್ದರೆ ಸಾಯಿ. ನಿನ್ನ ಹೆಂಡತಿನ್ನ ನಾನು ಬಿಟ್ಟು ಹಾಕೋದಿಲ್ಲ."

---

* ಸತ್ತವರ ಶ್ರಾದ್ಧ ದಿನ ಶ್ರಾದ್ಧ ಎಮುಗಿದ ಮೇಲೆ ಒಂದು ಎಲೆಯಲ್ಲಿ ಅನ್ನವನ್ನು ತೆಗೆದುಕೊಂಡು ಹೋಗಿ ಹೊರಗಿಟ್ಟು ಕೈ ಚಪ್ಪಾಳೆ ಹೊಡೆದು ಕಾಗೆಗಳನ್ನು ಕರೆಯುತ್ತಾರೆ. ಇದಕ್ಕೆ ಬ್ರಾಹ್ಮಣರಲ್ಲಿ 'ಎಲೆ ಹೊರಗಿಡುವದೆ'ಎಂಬ ಪರಿಪಾಟಿಯಿದೆ.

ಇನ್ನೊಮ್ಮೆ ನಗು.

ಮೊಡರ್ನ್ ರೆಸ್ಟೋರೆಂಟ್‌ನಲ್ಲಿ ಸಂಜೀವನ ಮದುವೆಯ ಕಾಫಿ ಕುಡಿಯುತ್ತಾ ನಮ್ಮ ಹರಟೆ ಹೀಗೇ ಒಂದೊಂದೇ ಡಿಗ್ರಿ ಏರುತ್ತಾ ಹೋಗುತ್ತಿತ್ತು.

ಈ ಪಾರ್ಟಿಯಲ್ಲಿ ನನ್ನ ಭಾವನವರೂ ಇದ್ದರು. ಅವರು ಮಾತ್ರ ಈ ಹರಟೆಯಲ್ಲಿ ಈವರೆಗೆ ಬಾಯಿ ಹಾಕಿರಲಿಲ್ಲ. ಈಗ ಸ್ವಲ್ಪ ಗಂಭೀರವಾಗಿಯೇ ಅವರು ಮಾತಾಡತೊಡಗಿದರು. ----

"ಯಾಕೆ ಸುಮ್ಮಗೆ ಅನಿಷ್ಟ ಮಾತನಾಡುತ್ತೀರಿ? ಹೀಗೆಲ್ಲ ಅನ್ನೋದು ತಪ್ಪು."

ದೇವರೇ ಇಲ್ಲ ಅಂತ ವಾದಿಸುವ ನಮ್ಮ ಭಾವನವರೂ ಹೀಗೆ ಹೇಳುವುದು ನನಗೆ ಆಶ್ಚರ್ಯವನ್ನುಂಟು ಮಾಡಿತು. ರಮೇಶ ಕೇಳಿಯೇ ಬಿಟ್ಟ -

"ಓ - ಹೋ -ಹೋ -ಹೋ! ಯಾವಾಗ ಇದು ಸನಾತನಿಗಳಾದದ್ದು ಶ್ರೀನಿವಾಸರಾಯರು?" ನಂದು ಸಂಜೀವನ ಎದೆಗೆ ಕೈಹಿಡಿದು "ಬದುಕಿದ್ದೀಯಾಪ್ಪ ಸಂಜೀವ!" ಎಂದು ನಂಜು ಮಾತಾಡಿದ.

"ನೋಡು, ಈಗಲೇ ಅರ್ಧ ಸತ್ತಾಗಿದೆ. ಇನ್ನೂ ಹೀಗೆ 'ಅನಿಷ್ಟ' ಮಾತಾಡಿದರೆ ಉಳಿದ ಅರ್ಧನೂ ಸಾಯುತ್ತಾನೆ, ನೋಡು "ಇನ್ನೊಬ್ಬ ಕುತರ್ಕ ಮಾಡಿದ.

ಭಾವ ಇನ್ನೂ ಗಂಭೀರವಾಗಿ ನುಡಿದರು -

"ನೀವು ಹೀಗೆ ಮಾತಾಡಿದ್ದರಿಂದ ಸಂಜೀವ ಸಾಯ್ತಾನೇಂತ ನಾನು ಹೇಳ್ತೋದಿಲ್ಲ. ಆದರೂ ಹೀಗನ್ನೋದು ಯೋಗ್ಯ ಅಲ್ಲ ಅಂತಲೇ ನಾನು ವಾದಿಸೋದು. ಇದು ನನ್ನ ಸ್ವಂತ ಅನುಭವದ ಮಾತು.

"ನಾವು ಚಿಕ್ಕವರಿರುವಾಗ ನನ್ನ ಅಜ್ಜಿ ಹೇಳುತ್ತಿದ್ದದ್ದು ನನಗೆ ನೆನಪಿದೆ. 'ಯಾವಾಗಲೂ ಕೆಟ್ಟ ಮಾತು ಆಡಬಾರದು. "ಅಸ್ತು ದೇವತೆ, ಆಗಾಗ್ಗೆ ಅಸ್ತು ಅಸ್ತು ಅನ್ನುತ್ತದೆ. ಕೆಟ್ಟದ್ದು ಹೇಳಿದರೆ ಅದಕ್ಕೇ ಅಸ್ತು ಅಂದು ಬಿಡುವುದೂ ಉಂಟು' ಎಂತ. ಆಗ ನಾನೂ ಅಜ್ಜಿಗೆ ಬುದ್ಧಿಯಿಲ್ಲವೆಂತ ಎಣಿಸಿಕೊಂಡಿದ್ದೆ. ಅವರಿಗೆ

ಹೆಚ್ಚಿಗೆ ಬುದ್ಧಿಯಿತ್ತು ಎಂತ ನಾನು ಈ ಹೊತ್ತೂ ಹೇಳುವುದಿಲ್ಲ. ಆದರೂ ಅವರು ಹೇಳುತ್ತಿದ್ದ ಕಟ್ಟುಕತೆಯಲ್ಲಿ ಸ್ವಲ್ಪ ಹುರುಳಿತ್ತೆಂದು ಆಮೇಲೆ ನನಗೆ ಅನುಭವವಾಯಿತು.

"ಈ ಅನುಭವ ಆದದ್ದು ಕೆಲವು ವರ್ಷಗಳು - ಅಂದರೆ ಇಪ್ಪತ್ತಾರು - ಹನ್ನೆರಡು - ಮೂವತ್ತೆಂಟು - ಹೌದು, ಹನ್ನೆರಡು ವರ್ಷಗಳ ಕೆಳಗೆ. ಆ ಸಂದರ್ಭವನ್ನು ನಿಮಗೆ ಹೇಳಿಬಿಡುತ್ತೇನೆ.

"ಆಗ ನನಗೆ ಇಪ್ಪತ್ತು ವರ್ಷ ವಯಸ್ಸು. ನಾನು ದಿವಾಕರ ಪ್ರೆಸ್ಸಿನಲ್ಲಿ ಪ್ರಿಂಟಿಂಗ್ ಎಪ್ರೆಂಟಿಸ್ ಆಗಿದ್ದೆ. ದಿವಾಕರ ಪ್ರೆಸ್ಸು ವಿಚಿತ್ರ ಜಾತಿಯ ಜನರ ಒಂದು ಕೂಟವಾಗಿತ್ತು. ಅಲ್ಲಿಯ ಪ್ರತಿಯೊಬ್ಬ ಕೆಲಸಗಾರನೂ ವಿಲಕ್ಷಣ ಪುರುಷನಾಗಿದ್ದ. ಅದಕ್ಕೆ ಸರಿಯಾಗಿ ಅದರ ಮೆನೇಜರರೂ ಒಂದು ತರಹದ ಮನುಷ್ಯರು. ಅವರು ಮುಂದರಿದ ವಿಚಾರಗಳ ವ್ಯಕ್ತಿಯಾಗಿದ್ದರಲ್ಲದೆ, ತಮ್ಮ ವಿಚಾರಗಳನ್ನು ಕಾರ್ಯರೂಪದಲ್ಲಿ ತರುತ್ತಲೂ ಇದ್ದರು. ಆದರಿಂದ ಅಲ್ಲಿಯ ಕೆಲಸಗಾರರೆಲ್ಲ ಸ್ವತಂತ್ರ ರೀತಿಯಲ್ಲಿ ವರ್ತಿಸಬಲ್ಲವರಾಗಿದ್ದರು. ಕೆಲಸವೊಂದನ್ನು ಚೆನ್ನಾಗಿ ಮಾಡುತ್ತಿದ್ದರೆ ತೀರಿತು; ಮತ್ತೆ ಯಾವ ರೀತಿಯಲ್ಲಿ ನಗೆ - ತಮಾಷೆಗಳು ನಡೆದರೂ ಅವರ ಸೈ.

"ದಿವಾಕರ ಪ್ರೆಸ್ಸನ್ನು ನೀವು ನೋಡಿರಬಹುದು. ಅದರ ಮುಂದೆ ಒಂದು ಒಳ್ಳೆಯ ಹೂತೋಟವಿದೆ. ಕೆಲಸಗಾರರೆಲ್ಲ ಸಾಯಂಕಾಲ ಕೆಲಸ ತೀರಿದ ಮೇಲೆ ಆ ತೋಟದಲ್ಲಿ ಹೋಗಿ ಕುಳಿತು ಬೇಕಷ್ಟು ನಕ್ಕು ನಗಿಸುತ್ತಿದ್ದರು.

"ಒಂದು ಶನಿವಾರ ಸಾಯಂಕಾಲ ಅಲ್ಲಿ ನಾವೆಲ್ಲ ಕಲೆತು ಹರಟೆ ಹೊಡೆಯುತ್ತಾ ಇದ್ದೆವು. ಒಬ್ಬ ಸೀಟಿನಲ್ಲಿ ಕುಳಿತಿದ್ದ, ಒಬ್ಬ ನೆಲದ ಹುಲ್ಲಿನ ಮೇಲೆ ಮಲಗಿದ್ದ. ಇನ್ನೊಬ್ಬ ಒರಗಿದ್ದ - ಹೀಗೆ ಒಬ್ಬೊಬ್ಬರು ಒಂದೊಂದು ರೀತಿಯಲ್ಲಿದ್ದರು. ನಾನು ನೆಲದ ಮೇಲೆ ತೆಳ್ಳಗೆ ಬೆಳೆದಿದ್ದ ದೂರ್ವೆ ಹುಲ್ಲ ಮೇಲೆ ಕುಳಿತಿದ್ದೆ.

"ನಮ್ಮ ಪ್ರೆಸ್ಸಿನ ಕೆಲಸ ಐದುವರೆ ಗಂಟೆಗೆ ಬಂದಾಗುತ್ತಿತ್ತು, ಆರು ಗಂಟೆಯವರೆಗೆ ನಮ್ಮ ಹುಚ್ಚಾಟ ನಡೆಯುತ್ತಾ ಇತ್ತು.

"ಆರು ಗಂಟೆ ಹೊತ್ತಿಗೆ ನಮ್ಮಲ್ಲೊಬ್ಬ ಕೊಡೆ ಹಿಡಿದುಕೊಂಡು ಹೊರಟವ ಅರ್ಧದಲ್ಲೇ ನಿಂತು - 'ಶೀನು ಕಲಾಸ್' ಎಂದ.

"ತಮಾಷೆ ಏನಂತ ನೋಡುವಾ ಎಂತ ನಾವೆಲ್ಲ ಎದ್ದು ನಿಂತೆವು. ಹೂದೋಟದ ಒಂದು ಬದಿಯಲ್ಲಿ ದೇವದಾರುವಿನ ಸಪೂರ ಹಲಗೆಯ ಮೇಲೆ ಮಲಗಿ ಶೀನು ನಿದ್ದೆ ಹೋಗಿದ್ದ - ಕಣ್ಣು - ಬಾಯಿ ಅರ್ಧ ತೆರೆದಿತ್ತು, ಕೈ ಎದೆಯ ಮೇಲಿತ್ತು.

'ನಿನ್ನೆ ಸಿನೆಮಕ್ಕೆ ಹೋಗಿದ್ದ ಅಂತ ತೋರುತ್ತದೆ,' ನಮ್ಮಲ್ಲೊಬ್ಬ ಊಹಿಸಿದ.

ನನ್ನ ತಲೆಯಲ್ಲಿ ಫಕ್ಕನೆ ಒಂದು ವಿಚಾರ ಹೊಳೆಯಿತು.

"ಗಡಿಬಿಡಿ ಮಾಡಬೇಡಿ; ಒಂದು ತಮಾಷೆ ಮಾಡುವಾ" ಎಂದು ನಾನು ಪ್ರೆಸ್ ಕಟ್ಕೋಣದೊಳಗೆ ಓಡಿ, ಒಂದು ವಸ್ತ್ರವನ್ನೂ ಒಂದು ಸೂಡಿ ಹುರಿಹಗ್ಗವನ್ನೂ ತಂದೆ.

"ಶೀನೂಗೆ ಚೆನ್ನಾಗಿ ನಿದ್ರೆ ಬಂದುಹೋಗಿತ್ತು. ಮೆಲ್ಲಗೆ ಆ ವಸ್ತ್ರವನ್ನು ಅವನಿಗೆ ಹೊದಿಸಿದೆವು. ಅವನಿಗದು ಗೊತ್ತಾಗಲಿಲ್ಲ. ಹಗ್ಗದಿಂದ ಕಾಲು ಎದೆಗಳೆಡೆಯಲ್ಲಿ ಸ್ವಲ್ಪ ಸಡಿಲಾಗಿಯೇ ಅವನನ್ನು ದೇವದಾರದ ಹಲಗೆಗೆ ಬಿಗಿಯಲಾಯಿತು.

"ಸುಳ್ಳು ಸುಳ್ಳೇ ಗಟ್ಟಿಯಾಗಿ ಅಳುತ್ತಾ ನಾಲ್ಕು ಜನರು ಹಿಡಿದು ಹೆಣವನ್ನು ಎತ್ತಿದ ಹಾಗೆಯೇ ಅವನನ್ನು ಎತ್ತಿದೆವು.

"ಇಷ್ಟಾದಾಗ ಶೀನೂಗೆ ಫಕ್ಕನೆ ಎಚ್ಚರವಾಯಿತು. ನಿದ್ದೆಗಣ್ಣಿನಲ್ಲಿ ಅಲ್ಲಿಯೇ ಏಳಹತ್ತಿದನು.

"ನೀನು ಸತ್ತಿದ್ದೀಯೋ, ಏಳಬಾರದು, ಸುಮ್ಮನೆ ಮಲಗಿಕೋ," ತಲೆಯ ಕಡೆ ಅವನನ್ನು ಹಿಡಿದಿದ್ದ ನಾನು ಹೇಳಿದೆ.

"ಇದನ್ನೆಲ್ಲ ನೋಡುತ್ತ ಬೇಲಿಯ ಮೇಲೆ ಕುಳಿತಿದ್ದ ನಮ್ಮ ನೆರೆಯ ಮನೆಯ ಹುಡುಗಿಯರು ಗೊಳ್ಳೆಂದು ನಕ್ಕರು. "



ಮಾಧ್ಯದಲ್ಲಿ ಒಂದು ಗುಟುಕು ಕಾಫಿಯನ್ನು ಕುಡಿದು ಭಾವ ಮುಂದರಿಸಿದರು :

"ಮರುದಿನ - ಆದಿತ್ಯವಾರ -ಸಾಯಂಕಾಲ ಅಲೆಯುತ್ತಾ ನಾನು ಪ್ರೆಸ್ಸಿಗೆ ಹೋದೆ. ಶೀನು ಒಬ್ಬನೇ ಹೂದೋಟದಲ್ಲಿ ಇದ್ದ. ಕೆಲವೇ ದಿನಗಳ ಹಿಂದೆ ಮದ್ರಾಸಿನಿಂದ ಅವನು ತಂದ ನಾಯಿಯೊಂದಕ್ಕೆ ಬುದ್ಧಿ ಕಲಿಸುತ್ತಾ ಕುಳಿತಿದ್ದ. ಕೈಯಲ್ಲಿ ಒಂದು ಬೆತ್ತ ಇತ್ತು.

ನಾನು ನೋಡುತ್ತ ನಿಂತೆ.

"ಬೆತ್ತವನ್ನು ನೆಲದ ಮೇಲೆ ಇಟ್ಟು 'ಹೆಕ್ಕು' ಎಂತ ಆಜ್ಞೆ ಇತ್ತ. ಅದಕ್ಕೆ ಸರಿಯಾಗಿ ತಿಳಿಯಲಿಲ್ಲ. ಬೆತ್ತವನ್ನು ಬಾಯಿಗೆ ತುರುಕಿದ. ಕಚ್ಚಿಕೊಳ್ಳಲಿಲ್ಲ. ಅದೇ ಬೆತ್ತದಿಂದ ಒಂದೇಟು ಹೊಡೆದ. ಒಮ್ಮೆ ಗುರ್ರೆಂದು ಮತ್ತೆ ಸುಮ್ಮನೆ ಕುಳಿತುಕೊಂಡಿತು ನಾಯಿ.

"ಪುನಃ ಬೆತ್ತವನ್ನು ನೆಲದ ಮೇಲಿಟ್ಟು 'ಹೆಕ್ಕು -ವನ್, ಟೂ, ಥ್ರಿ' ಎಂದು ಅಪ್ಪಣೆ ಕೊಟ್ಟ. ನಾಯಿ ಹೆಕ್ಕ ಕೊಳ್ಳಲಿಲ್ಲ. ಸಿಟ್ಟಿನಿಂದ ಚೆನ್ನಾಗಿ ಎರಡೇಟು ಹೊಡೆದುಬಿಟ್ಟ.

"ಬೇಟೆ ನಾಯಿಯ ಜಾತಿ. ಸ್ವಲ್ಪ ಹಸಿವೆಯೂ ಆಗಿತ್ತು. ಬೆತ್ತದ ಏಟು ಬಿದ್ದ ಕೂಡಲೆ ಸಿಟ್ಟು ಮಿತಿ ಮೀರಿ ಬಂತು ಅದಕ್ಕೆ - ಒಂದು ಹಾರು ಹಾರಿ ಶೀನುವಿನ ಕುತ್ತಿಗೆಯನ್ನು ಅಪ್ಪಿ ನಾಳವನ್ನು ಕಚ್ಚಿ ಹೊರಗೆಳೆಯಿತು. ಕಂಠನಾಳವು ಹೊರಗೆ ಬಂತು.

"ನೆತ್ತರು ಬಸಿಯಹತ್ತಿತು. ಪ್ರೆಸ್ಸಿನಲ್ಲಿ ಬೇರಾರೂ ಇರಲಿಲ್ಲ. ಗಾಬರಿಯಾಗಿ ನಾನು ಒಂದು ಕೂಗು ಕೂಗಿದೆ. ನೆರೆಯವರು ಓಡಿಬಂದರು. ಒಬ್ಬರು ಡಾಕ್ಟರರಲ್ಲಿಗೆ ಓಡಿದರು.

"ಎಲ್ಲ ಪ್ರಯತ್ನಗಳು ಮಾಡಲಾದವು. ಏನೂ ಪ್ರಯೋಜನವಾಗಲಿಲ್ಲ. ಕಾಲು ತಾಸಿನೊಳಗೆ ಶೀನು ತೀರಿಹೋದ.

"ನನ್ನ ಹೃದಯದಲ್ಲಿ ಆಗ ಯಾವ ಯಾತನೆಯಾಗಿರಬೇಕು ಹೇಳಿ. ಅದೇ ಮೊದಲ ದಿನ ನಾನು ಅವನನ್ನು ಹೆಣವನ್ನಾಗಿ ಮಾಡಿ ಅದರಿಂದ ತುಂಬಾ

ಸಂತೋಷ ಪಡೆದಿದ್ದೆ. ಆದರೆ ಇಂದು....? ಯಾರು ಬಗೆದಿದ್ದರು ಹುಡುಗಾಟಿಕೆಯ ಈ ರೀತಿ ಸತ್ಯವಾಗಬಹುದೆಂದು?

"ಅದೇ ಸ್ಥಳ - ಅದೇ ಸಮಯ ಅದೇ ಮುಚ್ಚಂಜೆ- ಅದೇ ರೀತಿ ಅವನನ್ನು ದೇವದಾರು ಹಲಗೆಯಿಂದೆತ್ತಿಕೊಂಡು ಚಟ್ಟದಲ್ಲಿಟ್ಟುಕೊಂಡು ಅಂತ್ಯಕ್ರಿಯೆಗಾಗಿ ಕೊಂಡುಹೋದೆವು: ನಾನು ಅದೇ ತಲೆಯ ಕಡೆ ಹಿಡಿದಿದ್ದೆ.

"ಆದರೆ ನಿನ್ನೆಯದು ಠಕ್ಕು ಗೋಳು, ಅಂದಿನದು ನಿಜವಾದ ನೀರವವಾದ ಕಣ್ಣೀರು."

"ಅದೇ ಬೇಲಿಯ ಮೇಲೆ ನಿಂತಿದ್ದ ಹುಡುಗಿಯರ ಕಣ್ಣುಗಳು ಎರಡು ಬಿಂದು ಬಿಸಿ ನೀರನ್ನು ಉರುಳಿಸಿದವು."

▲▲▲

"ಈಗ ಆ ಹೂದೋಟದಲ್ಲಿ ಒಂದು ಚಿಕ್ಕ ಗೋರಿ ಇದೆ. ಅದು ಶೀನೂನ ನೆನಪಿಗಾಗಿ. ಅಲ್ಲಿ ಈಗ ನಗೆ ಹೊಗೆಯುವುದಿಲ್ಲ. ಕಣ್ಣೀರಿನ ಹನಿಯೊಪ್ಪೊಪ್ಪೆ ಉದುರುವುದಿದೆ.

"ನಾವು ಮುಂಚಿನ ದಿನ ತಮಾಷೆ ಮಾಡದಿದ್ದರೆ ಶೀನು ಸಾಯುತ್ತಿದ್ದಿಲ್ಲವೆಂತಲ್ಲ. ಆದರೆ...."

❑

## ೮. ಎರಡು ಮಹಾ ಕಥೆಗಳು

### ಬುದ್ಧಿವಂತ

ಶೀನೂಗೂ ಮೊಯ್ದಿನ್ ಸಾಹೇಬರಿಗೂ ಬಹಳ ಸ್ನೇಹಾಚಾರವಿತ್ತು. ಶೀನು ಯಾವಾಗಲೂ ಮೊಯ್ದಿನ್ ಸಾಹೇಬರ ಬೀಡಾ ಅಂಗಡಿಯಲ್ಲಿ ಬೀಡಾ ತಿಂದು ನಗುತ್ತಾ ವಿನೋದ ಮಾಡುತ್ತಾ ನಿಂತಿರುವುದಿತ್ತು. ಮೊಯ್ದಿನ್ ಸಾಹೇಬರೂ ಶೀನೂನಿಂದ ಅನೇಕ ಉಪಕಾರಗಳನ್ನು ಪಡೆದಿದ್ದರು.

ಒಂದು ದಿನ ಶೀನು, ಸಾಯ್ಬರ ಅಂಗಡಿಯ ಬಾಗಲಲ್ಲಿ ಬೀಡಾ ತಿನ್ನುತ್ತಾ ನಿಂತಿರುವಾಗ ಒಬ್ಬಳು ಚೆಲುವೆ ಹೆಂಗಸು ಆ ಮಾರ್ಗವಾಗಿ ಹೋಗುತ್ತಿದ್ದಳು. ಸಾಯ್ಬರು ತಮ್ಮ ಜನ್ಮ ಸಹಜವಾದ ಹುಡುಗಾಟಿಕೆಯೊಡನೆ ಗೇಲಿ ಮಾಡಿದರು.

"ನೋಡಿಯಯ್ಯ, ಶ್ರೀನಿವಾಸರಾಯರೇ, ಎಂಥಾ ವೈಯಾರದ ಹುಡುಗಿ-"

"ಹೌದು ಸಾಯ್ಬರೆ, ಭಾರೀ ಝೋಕಿ ಹುಡುಗಿ" ಎಂದು ಶೀನು ನಗುತ್ತಾ ಸೈಗುಟ್ಟಿದ.

ಶೀನೂ ಹೋದ ಕೂಡ್ಲೆ ಅಲ್ಲಿಯೇ ನಿಂತಿದ್ದ ಮತ್ತೊಬ್ಬ ಸಾಯ್ಬರು -

"ಕ್ಯೋಂ, ಬೇ, ಮೊಯ್ದಿನ್, ವೋ ಲಡಕೀ ಹೈ ಉನ್‌ಕೀ ಔರತ್( ಅರೇ ಮೊಯ್ದಿನ್, ಆ ಹುಡುಗಿ ಅವರ ಹೆಂಡತಿ)" ಎಂದು 'ಸೂತ ಉವಾಚ' ಮಾಡಿದರು.

"ಹಾಗಾದರೆ ಅವರು ಯಾಕೆ ಮಾತಾಡ್ಲಿಲ್ಲ?"

"ಹಾಗೆ ಮಾತಾಡಿ ಮುಖಕ್ಕೆ ಮಸಿ ಮಾಡ್ಕೊಳ್ಳೋಕೆ ಅವರು ನಿನ್ನಾಗೆ ಬೇವ್‌ಕೂಫ್ ಅಲ್ಲ."

ಮರುದಿನ ಶ್ರೀನಿವಾಸ ಮೊಯ್ಬಿನ್ ಸಾಯ್ಬರಲ್ಲಿ ಬೀಡ ತಿನ್ನಲು ಹೋದಾಗ ಸಾಯ್ಬರ ಮುಖ ನೋಡಬೇಕಿತ್ತು!

▲▲▲

## ಶೆಟ್ರ ಟಂಕಸಾಲೆಯಿಂದ

ತನ್ನ ಬಚ್ಚಾಲಿತನದ ಪರಿಣಾಮವಾಗಿ ಕಾಂತಪ್ಪ ಶೆಟ್ಟರು ಕಾಂತು ಶೆಟ್ಟಿಯಾಗಿ ಹೋಗಿದ್ದರು.

ಯಾವ ಯಾವ ಹೋಟೆಲಿನಲ್ಲಿ ಕಡಮಾಡಿ ಕಾಫಿ ಕುಡಿದು ದುಡ್ಡಿಗೆ ತಿರ್ಪತಿನಾಮ ಹಚ್ಚಿದ್ದರೆಂದು ಅವರಿಗೇ ಗೊತ್ತು. ಅಂತೂ ಯಾರೂ ಅವರಿಗೆ ಕಾಫಿ ತಿಂಡಿ ಕೊಡುತ್ತಿದ್ದಿಲ್ಲ.

ಒಂದು ದಿನ ಶಂಕರ ಭಟ್ಟರ ಹೊಟೇಲಿಗೆ ಹೋಗಿದ್ದ ಕಾಂತು ಶೆಟ್ಟಿ. "ಒಂದು ಸಿಂಗಲ್ ಕಾಫಿ ಕೊಡಿ ಭಟ್ರೆ". ದರ್ಪ ಸಹಿತ ಹೇಳಿದ.

"ಕಾಸು ಕೊಡದೆ ಕಾಫಿ ಕೊಡ್ಲಿಕ್ಕೆ ಆಗೋದಿಲ್ಲ." ಎಂದರು ಶಂಕರ ಭಟ್ರು.

"ದುಡ್ಡು ತಾರದೆ ಕಾಫಿ ಕುಡಿಯಲಿಕ್ಕೆ ಬರುತ್ತೇನಯ್ಯಾ? ಇಕೊಳ್ಳಿ ನೋಡಿ ಬೇಕಾದರೆ?" ಎಂದು ಅಂಗವಸ್ತ್ರದ ತುದಿಯಲ್ಲಿ ಕಟ್ಟಿದ್ದ ಅರ್ಧಾಣೆಯನ್ನು ತೋರಿಸಿದ. ಭಟ್ರು ಕಾಫಿ ಕೊಟ್ಟರು.

ಕುಡಿದಾದ ಮೇಲೆ ಕಾಂತು ಸೆಟ್ಟಿ ಅಂಗವಸ್ತ್ರದ ತುದಿಯನ್ನು ಬಿಚ್ಚಿ ಸಂಭಾವಿತರ ಹಾಗೆ ಒಂದು ಉರುಟಾದ ವಸ್ತುವನ್ನು ಭಟ್ರ ಮೇಜಿನ ಮೇಲಿಟ್ಟ.

ಭಟ್ರು ನೋಡುತ್ತಾರೆ - ಅದು ಉರುಟಾದ ಒಂದು ರಟ್ಟಿನ ಚೂರು. ಕಾಂತು ಶೆಟ್ರು ಅಷ್ಟರಲ್ಲಿ ಇಪ್ಪತ್ತೈದು ಮಾರು ದೂರ.

❑

## ೯. ಒಂದು ಅ-ನೀತಿ ಕಥೆ

ಕ್ರಿಸ್ತುದಾಸ ಪಾದ್ರಿಗಳ ಹೆಸರು ಕೇಳದವರು ಸುತ್ತಮುತ್ತಲ ಹತ್ತೂರಿನಲ್ಲಿ ಯಾರೂ ಸಿಗರು. ಕಿರಿಸ್ತಾನರು ಅವರನ್ನು ದೇವರೇ ಕಳಿಸಿದ ದೂತ ಅಂತ ಎಣಿಸುವರು. ನರಕುರಿಗಳನ್ನು ಹಾದಿ ತಪ್ಪದ ಹಾಗೆ ಕಾಯುವುದಕ್ಕೆ ಬಂದ ಕುರುಬ ಅವರು ಎಂದು ಮುದುಕರು ಹೇಳುವರು. ಅವರನ್ನು ಹೊಗಳುವವರು ಕಿರಿಸ್ತಾನರು ಮಾತ್ರ ಅಲ್ಲ. ಹಿಂದೂಗಳೂ ಅವರನ್ನು ಮಹಾ ಪುಣ್ಯಾತ್ಮ ಎಂದು ತಿಳಿದುಕೊಂಡಿದ್ದಾರೆ. ಕ್ರಿಸ್ತುದಾಸರನ್ನೇ ಕೇಳಿದರೆ ಅವರು "ಅಯ್ಯೋ ನಾನೆಂಥಾ ಕುರುಬ! ಲೋಕಕ್ಕೆಲ್ಲ ಇರುವವನು ಒಬ್ಬನೇ ಕುರುಬ. ಅವನೇ ಏಸು ಕ್ರಿಸ್ತ. ನಾವೆಲ್ಲರೂ ಬರೀ ಕುರಿಗಳು. ಇನ್ನು ಪುಣ್ಯಾತ್ಮ ಅನ್ನುತ್ತೀರಾ? ನಮ್ಮ ಕ್ರಿಸ್ತು ಧರ್ಮದಲ್ಲಿ ಪುಣ್ಯ ಅನ್ನುವುದೇ ಇಲ್ಲ. ಜನಗಳಿಗೆ ಒಳ್ಳೇದು ಮಾಡುವುದು ಲೋಕದಲ್ಲಿ ಹುಟ್ಟಿದ ನರಮನುಷ್ಯನ ಕರ್ತವ್ಯ. ಅದು ದೇವರ ಅಪ್ಪಣೆ. ಒಳ್ಳೇದು ಮಾಡಿದವನಿಗೆ ಪುಣ್ಯ ಅನ್ನುವ ಬೇರೆ ಸಂಬಳ ಇಲ್ಲ. ಒಳ್ಳೇದು ಮಾಡದಿದ್ದರೆ ಪಾಪ ಬರುತ್ತದೆ. ಕೆಟ್ಟದು ಮಾಡಿದರೆ ಮಾಪಾಪ ಬರುತ್ತದೆ. ನಾನು ನರಮನುಷ್ಯನು ಮಾಡಬೇಕಾದ ಕೆಲಸವನ್ನು ಮಾತ್ರ ನನಗೆ ತಿಳಿದಷ್ಟು ಮಾಡುತ್ತೇನೆ. ಮಹಾ ಕುರುಬನಾದ ಏಸು ನಡೆದು ತೋರಿಸಿದ ಹಾದಿಯಲ್ಲಿ ನಡೆಯುವ ಪ್ರಯತ್ನ ಮಾಡುತ್ತೇನೆ," ಎಂದು ಹೇಳಿ ಆ ದೇವರಿಗೆ ಕೈ ಮುಗಿಯುವರು. ಅವರ ಎರಡೂ ಕಣ್ಣುಗಳಲ್ಲಿ ಯಾವಾಗಲೂ ಕರುಣೆಯ ತಿಂಗಳು ಬೆಳಕು ಸುರಿಯುತ್ತಿರುವುದು. ಪಾಪಿಷ್ಠರನ್ನು ಕಂಡರೆ ಆ ಕರುಣೆ ಹುಣ್ಣಿಮೆಯ ತಿಂಗಳು ಬೆಳಕಿನಂತೆ ಹೆಚ್ಚು

ಆಳವಾಗುವುದು. ಅವರ ಸಹಾಯ, ಉಪದೇಶ ಪಡೆದು ಎಷ್ಟೋ ಕಳ್ಳರು ಸಜ್ಜನರಾಗಿದ್ದಾರೆ ಪಾಪಿಗಳು ಒಳ್ಳೆಯವರಾಗಿದ್ದಾರೆ ದೇವರಿಲ್ಲ ಎನ್ನುವವರು ಭಕ್ತರಾಗಿದ್ದಾರೆ

ಆದರೆ ಕ್ರಿಸ್ತುದಾಸರ ಮನಸಿನ ಮೇಲೆ ಒಂದು ಭಾರಿ ಭಾರ ಉಂಟು. ಅವರ ಇಗರ್ಜಿಯ ನೆರೆಯಲ್ಲೇ ಬಸ್ತ್ಯಾಂ ಪೊರ್ಬು ಎಂದೊಬ್ಬ ಇದ್ದಾನೆ. ಅವನಿಗೆ ಮಾತ್ರ ಪಾದ್ರಿಗಳ ಯಾವ ಉಪದೇಶವೂ ನಾಟಿಲ್ಲ. ಅವನು ಶುದ್ಧ ನಾಸ್ತಿಕ. ಬುದ್ಧಿ ತಿಳಿದ ನಂತರ ಅವನು ಒಮ್ಮೆಯೂ, ರವಿವಾರ ಕೂಡ, ಇಗರ್ಜಿಗೆ ಬಂದವನಲ್ಲ. ಹಾಗೆ ಕೇಳಿದರೆ ಮನುಷ್ಯ ಅಂಥಾ ಕೆಟ್ಟವನಲ್ಲ. ಅತ್ತಿತ್ತಲವರಿಗೆ ಕೈಲಾದ ಸಹಾಯ ಮಾಡುವವನೇ. ಆದರೆ ದೇವರು ಇಲ್ಲ; ಸ್ವರ್ಗ ನರಕ ಸುಳ್ಳು -ಹೀಗೆಲ್ಲ ಬೊಗಳೆ ಮಾತಾಡುವ ಚಟ ಅವನಿಗೆ. ಒಂದೊಂದು ಆದಿತ್ಯವಾರ ಕ್ರಿಸ್ತುದಾಸ ಪಾದ್ರಿಗಳು ಇಗರ್ಜಿಯ ಒಳಗೆ ಉಪದೇಶ ಮಾಡುವಾಗ ಬಸ್ತ್ಯಾಂ ಪೊರ್ಬು ಹೊರಗೆ ಹತ್ತು ಪೋಲಿ ಹುಡುಗರನ್ನು ಕೂಡಿಸಿ, ಹರಕು ದೇವದಾರದ ಪೆಟ್ಟಿಗೆಯ ಮೇಲೆ ನಿಂತುಕೊಂಡು ಕೈಯೆತ್ತಿ ತಾನೂ ಉಪದೇಶ ಸುರು ಮಾಡುವ. ಪಾದ್ರಿಗಳು " ಓ ಕುರಿಜನಗಳೇ, ನಿಮಗೆ ಬುದ್ಧಿ ಇಲ್ಲ!" ಎನ್ನುತ್ತಿರುವಾಗ ಪೊರ್ಬುವೂ "ಓ ಕುರಿ ಜನಗಳೇ, ನಿಮಗೆ ಬುದ್ಧಿ ಇಲ್ಲ!" ಎನ್ನುವ. ಅವರು "ಕ್ರಿಸ್ತುವನ್ನು ನಂಬಿರಿ! ದೇವರನ್ನು ನೆನೆಯಿರಿ!" ಎನ್ನುತ್ತಿರುವಾಗ ಇವನು "ದೇವರನ್ನು ನಂಬಬೇಡಿ, ನಿಮ್ಮನ್ನೇ ನಂಬಿಕೊಳ್ಳಿರಿ! ಯಾವ ದೇವರೂ ನಿಮಗೆ ದಿನದ ರೊಟ್ಟಿ ಕೊಡಲಾರ; ನಿಮ್ಮ ರಟ್ಟೆ ಕೊಟ್ಟೀತು! ನಿಮ್ಮ ಕೈಗಳು ಕೊಟ್ಟಾವು!" ಎಂದು ಬಾಯಿ ಮಾಡಿ ಕೂಗುವ. ಅವನ ಮಾತು ಕೇಳುವುದಕ್ಕೆ ಕೆಲ ಬಿಸಿ ನೆತ್ತರ ಜವ್ವನಿಗರು ಸೇರುವುದು ನೋಡಿ ಕ್ರಿಸ್ತುದಾಸರಿಗೆ ತಾಳಲಾರದ ದುಃಖ ಆಗುವುದು.

"ದೇವರೇ, ಈ ಮನುಷ್ಯನಿಗೆ ಒಳ್ಳೇ ಬುದ್ಧಿ ಕೊಡು!" ಎಂದು ಕ್ರಿಸ್ತುದಾಸರು ದಿನಾ ರಾತ್ರಿ ಮಲಗುವಾಗ ಪ್ರಾರ್ಥನೆ ಮಾಡುವರು. ಎಷ್ಟೋ ಸಲ ಅವರು ಪೊರ್ಬುವಿನ ಮನೆಗೂ ಹೋದದ್ದುಂಟು. ಅವನು ಅವರನ್ನು ಕೂರಿಸಿ ಕೊಂಡು, "ಏನು ಪಾದ್ರಿಗಳೇ, ಏನು ಈ ಪಾಪಿಯ ಮನೆಗೆ ಸವಾರಿ ಬಿಟ್ಟಿರಿ? ನನ್ನಲ್ಲಿಗೆ ಬಂದರೆ ಕಡೆಗೆ ನೀವೂ ನರಕಕ್ಕೆ ಹೋಗಬೇಕಾದೀತು ನೋಡಿಕೊಳ್ಳಿ!" ಎಂದು ತಮಾಷೆ ಮಾಡುವ.

"ಪೊರ್ಬೊರ್ೀ, ನಿನ್ನದು ಮತ್ತೆಲ್ಲಾ ಸರಿ. ನೀನು ದೇವರನ್ನೊಂದು ನಂಬಿದರೆ ನಿನಗೆ ಸ್ವರ್ಗದ ಬಾಗಿಲು ಖಂಡಿತ ತೆರೆಯುವುದು. ನೀನು ದೇವರಿಲ್ಲೆಂದು ಯಾಕೆ ಹೇಳುವಿ? ದೇವರು ಇಲ್ಲದಿದ್ದರೆ ಲೋಕದಲ್ಲಿ ಮನುಷ್ಯನಿಗೆ ಏನು ಅರ್ಥ ಇದ್ದೀತು? ಒಳ್ಳೇದು - ಕೆಟ್ಟದ್ದಕ್ಕೆ ಏನು ಬೆಲೆ ಇದ್ದೀತು? ಮನುಷ್ಯನ ಮನಸ್ಸಿಗೆ ಮೂಗುದಾರ ಎಲ್ಲಿದ್ದೀತು? ಮನುಷ್ಯ ಎನ್ನುವವ ಬಹಳ ಬಲವಿಲ್ಲದ ಪ್ರಾಣಿಯಲ್ಲವೆ? ದೇವರೇ ಅವನಿಗೆ ಬಲವಲ್ಲವೆ? ದೇವರು ಇಲ್ಲದಿದ್ದರೆ ಬಲವಿಲ್ಲದವನ ತಲೆ ಕಾಯುವವರು ಯಾರು?" ಎಂದು ವಾದಿಸುವರು. ಪೊರ್ಬುಗ ಹೋಹೋ ಎಂದು ನಗುವ. "ಪಾದ್ರಿಗಳೇ, ನನಗೆ ನಿಮ್ಮ ಸ್ವರ್ಗ ಬೇಡ. ದೇವರನ್ನು ಕೈಬಿಟ್ಟರೆ ಮನುಷ್ಯಪ್ರಾಣಿ ಈ ಲೋಕವನ್ನೇ ಸ್ವರ್ಗ ಮಾಡಬಲ್ಲ. ನಿಮ್ಮ ದೇವರು ಈ ಲೋಕದಲ್ಲಿ ಒಳಿತು - ಕೆಡುಕು ಯಾಕೆ ಇಟ್ಟಿದ್ದಾನೆ? ರಾತ್ರಿ ಪಾಪ ಮಾಡಿ ಬೆಳಗ್ಗೆ ದೇವರೊಡನೆ ಕ್ಷಮೆ ಕೇಳಿ. ರಾತ್ರಿ ಮತ್ತೆ ಪಾಪ ಮಾಡಲಿಕ್ಕೆ ನೀವು ಜನರಿಗೆ ಪ್ರೋತ್ಸಾಹ ಕೊಡುತ್ತೀರಲ್ಲ. ಮನುಷ್ಯ ತನಗೆ ತಾನು ಜವಾಬ್ದಾರಿಯಾಗಿ ತನ್ನ ಮೂಗುದಾರ ತಾನು ಹಿಡಿಯಲಿಕ್ಕೆ ಕಲಿತರೆ ದೇವರು ಯಾಕೆ? ಕಲಿಯದಿದ್ದರೆ ದೇವರು ಇದ್ದೂ ಏನು ಲಾಭ? ನಿಮಗೆ ಬುದ್ಧಿಯಿಲ್ಲ ಪಾದ್ರಿಗಳೇ. ಮನುಷ್ಯ ತನ್ನ ಅಂಗಳದ ಕಸ ಹೊಲಸು ತಾನು ಗುಡಿಸಿ ತೆಗೆಯಬೇಕು. ದೇವರನ್ನು ನಂಬಿ ಕೂತರೆ ಅವನ ಬೆನ್ನ ಕೋಲು ಎಂದೂ ನೆಟ್ಟಗಾಗದು. ಅದು ನೆಟ್ಟಗಾಗದೆ ಅವನಿಗೆ ಗತಿ ಇಲ್ಲ!" ಎಂದು ಪೊರ್ಬುಗ ಅವರ ಬಾಯಿ ಮುಚ್ಚಿಸಿ, ಒಂದು ಕಪ್ಪು ಒಳ್ಳೇ ಕಾಫಿ ಕೊಟ್ಟು " ಹೌದಾ ಪಾದ್ರಿಗಳೇ, ನಿಮ್ಮ ನರಕದಲ್ಲಿ ಕಾಫಿ ಸಿಗುತ್ತದಲ್ಲ? ಅದು ಇಲ್ಲದಿದ್ದರೆ ನಾನು ಇಲ್ಲಿಂದ ಓಡಿಯೇ ಹೋದೇನು!" ಎನ್ನುವ, ಪಾದ್ರಿಗಳು ಇಗರ್ಜಿಗೆ ತಿರುಗಿ ಬಂದು, ವೇದಿಕೆಯ ಮುಂದೆ ಮೊಣಕಾಲೂರಿ, ಕ್ರೂಜೆಯ ಗುರುತು ಮಾಡಿ, "ದೇವರೇ, ಈ ಮನುಷ್ಯನ ಮಾತಿನ ಹೊಂಡದಲ್ಲಿ ನಾನೇ ಜಾರಿ ಬೀಳದಂತೆ ಕಾಪಾಡಪ್ಪಾ!" ಎಂದು ಪ್ರಾರ್ಥನೆ ಮಾಡುವರು.

ಹೀಗಿರುತ್ತಾ ಒಂದು ದಿನ ಒಂದು ಸುದ್ದಿ ಕೇಳಿ ಪಾದ್ರಿಗಳಿಗೆ ಸಿಡಿಲು ಬಡಿದ ಹಾಗಾಯಿತು. ಬಸ್ತ್ಯಾಂ ಪೊರ್ಬುಗ ಆವೊತ್ತು ಬೆಳಗು ಮುಂಜಾನೆ ಧಡ್ಡನೆ

ಬಿದ್ದು ಧಿಢ್ಡನೆ ಜೀವ ಬಿಟ್ಟನಂತೆ. "ಅಯ್ಯೋ ದೇವರೇ! ಅವನು ಸಾಯುವುದು ನನಗೆ ತಿಳಿಯದೆ ಹೋಯಿತಲ್ಲ. ಗೊತ್ತಾಗಿದ್ದರೆ ಅವನು ಕೊನೆಯ ಶ್ವಾಸ ಎಳೆಯುವಾಗಲಾದರೂ ಹೋಗಿ ಉಪದೇಶ ಕೊಟ್ಟು ಪವಿತ್ರ ಜಲ ಪ್ರೋಕ್ಷಣೆ ಮಾಡಿ ಅವನ ಮನಸ್ಸು ಬದಲಾಯಿಸಲು ಪ್ರಯತ್ನ ಮಾಡುತ್ತಿದ್ದೆ. ಅಯ್ಯೋ! ಈ ಒಳ್ಳೇ ಮನುಷ್ಯ ಅನ್ಯಾಯವಾಗಿ ನರಕಕ್ಕೆ ಹೋಗುವನಲ್ಲಾ!" ಎಂದು ಪಾದ್ರಿಗಳು ಕಣ್ಣೀರು ಸುರಿಸಿದರು. ಅವಸರದಲ್ಲಿ ಅವನ ಮನೆಗೆ ಹೋದರು. ಅಲ್ಲಿ ಅವನ ಉಯಿಲನ್ನು ಓದುತ್ತಿದ್ದರು. "ನಾನು ಸತ್ತರೆ ನನ್ನನ್ನು ಸುಮ್ಮನೆ ಒಯ್ದು ಹುಗಿದು ಬಿಡಬೇಕು. ಯಾವ ಪಾದ್ರಿಗಳೂ ಯಾವ ಮಂತ್ರ ಓದುವುದು ಬೇಡ!" ಎಂದು ಉಯಿಲಿನಲ್ಲಿ ಅವನು ಬರೆದಿಟ್ಟಿದ್ದನು. ಪಾದ್ರಿಗಳು " ಕಡೆಗೂ ಈ ಕುರಿ ನನ್ನ ಕೈ ಮೀರಿ ಸೈತಾನನೆಂಬ ತೋಳನ ಬಾಯಿಗೆ ಬಿತ್ತಲ್ಲಾ!" ಎಂದು ದುಃಖಿಸಿದರು.

ಬಹಳ ವರ್ಷ ಕಳೆಯಿತು. ಪಾದ್ರಿಗಳ ಉಪದೇಶದಿಂದ ಸುತ್ತ ಮುತ್ತ ಒಬ್ಬ ನಾಸ್ತಿಕನೂ ಇಲ್ಲದಂತಾಯಿತು. ಒಂದು ದಿನ ಪಾದ್ರಿಗಳಿಗೂ ದೇವರ ಕರೆ ಬಂತು. ಸಾಯುವಾಗ ಅವರ ಮನಸ್ಸಿನ ಒಂದು ಮಗ್ಗುಲಲ್ಲಿ ಬಸ್ತ್ಯಾಂ ಪೊರ್ಬುವನ್ನು ತಾನು ಬಚಾವು ಮಾಡದೆ ಹೋದೆನಲ್ಲಾ ಅನ್ನುವ ನೋವು ಉಳಿದೇ ಇತ್ತು.

ಕ್ರಿಸ್ತುದಾಸರನ್ನು ಸೀದಾ ಸ್ವರ್ಗಕ್ಕೆ ಕರೆದುಕೊಂಡು ಹೋದರು. ಬಾಗಿಲಲ್ಲಿ ಸಂತ ಪೇತ್ರರು ಅವರಿಗೆ ಸ್ವಾಗತ ಮಾಡಿದರು. ಆದರೆ ಪಾದ್ರಿಗಳು ಮೊದಲು ಪೇತ್ರರಿಗೆ "ಸಂತರೇ, ನನ್ನ ಒಂದು ಆಸೆ ಉಂಟು. ಬಸ್ತ್ಯಾಂ ಪೊರ್ಬು ಅಂಬುವ ನನ್ನ ನೆರೆಮನೆಯವನೊಬ್ಬ ಬುದ್ಧಿ ಸಾಲದೆ ನಮ್ಮ ದೇವರನ್ನು ನಂಬದೆ ನರಕಕ್ಕೆ ಹೋಗಿದ್ದಾನೆ. ನರಕದಲ್ಲಾದರೂ ಅವನನ್ನು ಇನ್ನೊಮ್ಮೆ ಕಂಡು ಅವನ ಮನಸ್ಸನ್ನು ನಮ್ಮ ದೇವರ ಕಡೆಗೆ ತಿರುಗಿಸುವ ಕಡೇ ಪ್ರಯತ್ನ ಮಾಡಬೇಕೆಂದಿದೆ. ಅದಕ್ಕೆ ತಮ್ಮ ಅಪ್ಪಣೆ ಬೇಕು" ಎಂದರು. ಸಂತ ಪೇತ್ರರಿಗೆ ಸೋಜಿಗವಾಯಿತು. ಸ್ವಲ್ಪ ನಗುವೂ ಬಂತು. "ಆಗಲಿ, ನೀವು ಭೂಲೋಕದಲ್ಲಿ ನಮ್ಮ ದೇವರಿಗಾಗಿ ಬಹಳ ಕೆಲಸ ಮಾಡಿದ್ದೀರಿ. ನಿಮ್ಮ ಕೊನೆಯ ಆಸೆಗೆ ನಾನು ಅಡ್ಡ ಬರಲಾರೆ. ಹೋಗಿಬನ್ನಿ" ಎಂದು ಒಬ್ಬ ದೂತನನ್ನು ಜತೆ ಮಾಡಿ ಕ್ರಿಸ್ತುದಾಸರನ್ನು ನರಕಕ್ಕೆ ಕಳಿಸಿದರು.

ಕ್ರಿಸ್ತದಾಸರು ನರಕಕ್ಕೆ ಹೋದರು. ಹೊರಗಿನ ಆವರಣದಲ್ಲಿ ಬಹಳ ಪುರಾತನ ಕಾಲದ ಒಳ್ಳೊಳ್ಳೆ ಆತ್ಮಗಳು ನರಕವನ್ನು ಭೋಗಿಸುತ್ತಾ ಇದ್ದುದನ್ನು ಕಂಡರು. ಆದರೆ ಅವರಿಗೆ ನರಕದ ಅಧಿಕಾರಿಗಳು ಕಡು ದಂಡನೆಗಳನ್ನು ಕೊಡುತ್ತಿರಲಿಲ್ಲ. ಕ್ರಿಸ್ತ ದೇವರು ಹುಟ್ಟುವ ಮುಂಚೆ ಭೂಮಿಯಲ್ಲಿ ಹುಟ್ಟಿ ಸತ್ತದ್ದರಿಂದ ಸತ್ಯ ಧರ್ಮವನ್ನು ಸೇರಿ ಬಚಾವಾಗುವುದಕ್ಕೆ ಆಸ್ಪದವೇ ಸಿಗದೆ ನರಕದ ಹೊರ ಮಗ್ಗುಲಲ್ಲಾದರೂ ಇರುವ ಅವಸ್ಥೆ ಅವರಿಗೆ ಒದಗಿತ್ತು. ಪಾಪ, ಏನು ಮಾಡುವುದು? ಇವರು ಹುಟ್ಟಲು ಸಾಯಲು ಅವಸರ ಮಾಡಿ ಕೆಟ್ಟರು ಎಂದು ಪಾದ್ರಿಗಳಿಗೆ ತೋರಿತು. ಆದರೆ ಅವರಿಗೆ ಬಸ್ತ್ಯಾಂ ಪೊರ್ಬುವಿನದೇ ಧ್ಯಾನ. ಅವರಿಗೆ ನರಕಾಧಿಕಾರಿಗಳು ಒದಗಿಸಿದ ಮಾರ್ಗದರ್ಶಕನು, ದಾಖಲೆಗಳನ್ನು ತಿರುವಿ ಹಾಕಿ, "ಅಯ್ಯೋ ಪಾದ್ರಿಗಳೇ, ನಿಮಗೆ ಆತನ ಗೋಜು ಯಾಕೆ? ಅವನು ಅತಿ ಕೆಳಗಿನ ಅತಿ ಭಯಂಕರ ನರಕದಲ್ಲಿ ದಾಖಲಾಗಿ ಸುಮಾರು ವರ್ಷವಾಯಿತು. ಅಷ್ಟು ಕೆಟ್ಟ ನರಕವೇ ಬೇರೆ ಇಲ್ಲ. ನಾವು ಯಾರೂ ಆ ಕಡೆಗೆ ಹೋಗುವುದು ಬಹಳ ಕಮ್ಮಿ. ಪೊರ್ಬುವನ್ನು ಅಲ್ಲಿಗೆ ತಳ್ಳಿದ ಮೇಲೆ ಅಲ್ಲಿಗೆ ಹೋದ ಮನುಷ್ಯರು ಇಲ್ಲವೆಂದೇ ಹೇಳಬಹುದು. ದೇವರೇ ಇಲ್ಲ ಅಂತ ಕಡೇತನಕ ಸಾಧನೆ ಮಾಡಿದ ಪಾಪಿಗಳು ಬಹಳ ಕಡಿಮೆ, ತಿಳಿಯಿತೆ?" ಎಂದು ವಿವರಿಸಿದನು. ಪಾದ್ರಿಗಳು ಹಟ ಬಿಡಲಿಲ್ಲ. ಹಾಗಾದರೆ ನಿಮ್ಮಿಷ್ಟ ಎಂದು ಅವನು ಅವರನ್ನು ಕರೆದುಕೊಂಡು ಹೊರಟನು.

ಒಳ ಒಳಗಿನ ಕೆಳ ಕೆಳಗಿನ ಸುತ್ತುಗಳಿಗೆ ಹೋದಂತೆ ಘೋರ ಸನ್ನಿವೇಶಗಳನ್ನು ಪಾದ್ರಿಗಳು ಕಂಡರು. ದುರ್ನಾತದಲ್ಲಿ ಮೂಗು ಹಿಡಿದುಕೊಂಡು ಇರಲಿಕ್ಕೇ ಆಗದು ಎನ್ನುವ ಹಾಗಾಯಿತು. ಎಲ್ಲಕಡೆ ಅಳಲುವ ಬೆಂಕಿಯಿಂದ ಸೆಕೆ ತಾಳದಂತಾಯಿತು. ಕಲ್ಲು ಮುಳ್ಳುಗಳು ದಾರಿಯನ್ನು ದುರ್ಗಮವಾಗಿ ಮಾಡಿದ್ದವು. ಪಾದ್ರಿಗಳ ಮೈ ಬೆವರಿತು. ಪಾದಗಳಲ್ಲಿ ರಕ್ತ ಸೋರಿತು. ಮೂಗು ಒತ್ತಿ ಹಿಡಿದು ಮುಂದುವರಿದರು. ಇನ್ನೂ ಕೆಳಗೆ ಒಳಗೆ ಹೋದರೆ ಕಗ್ಗತ್ತಲೆ ಕವರಿತ್ತು. ಆದರೆ ಶಾಕ ಮಾತ್ರ ಅಸಾಧ್ಯವೆನಿಸುತ್ತಿತ್ತು. ಯಾಕೆಂದರೆ ಹಿಂದಿನ ನರಕಗಳಲ್ಲಿದ್ದ ಹಾಗೆ ಅಲ್ಲಿ ಕೆಂಪು, ಹಳದಿ, ಅಥವಾ ಬಿಳಿ ಬೆಂಕಿ ಉರಿಯದೆ ಕಪ್ಪು ಬೆಂಕಿ ಉರಿಯುತ್ತದೆಂದು ಮಾರ್ಗದರ್ಶಕನು ವಿವರಿಸಿದನು. ನರಕವಾಸಿ ಆತ್ಮಗಳು

ತಾಳಲಾರದೆ ಆರ್ತನಾದ ಮಾಡುವುದು ಕೇಳಿಸುತ್ತಿತ್ತೇ ಹೊರತು ಕಾಣಿಸುತ್ತಿರಲಿಲ್ಲ. ಪಾದ್ರಿಗಳ ಸಂಗಡ ಬಂದ ದೂತ, "ಇನ್ನು ಸಾಕು ಪಾದ್ರಿಗಳೇ, ವಾಪಸು ಹೋಗುವ. ಇಲ್ಲೇ ಇರುವ ನನಗೆ ತಡೆದುಕೊಳ್ಳುವುದು ಕಷ್ಟವಾಗುತ್ತದೆ. ನೀವು ಹೇಗೆ ಸಹಿಸುತ್ತೀರಿ!" ಎಂದು ಹೇಳಿಕೊಂಡನು. ಆದರೆ ಕ್ರಿಸ್ತುದಾಸರ ಮನಸ್ಸು ದೃಢವಾಗಿತ್ತು.

ಕೆಲವು ಫರ್ಲಾಂಗ್ ಮುಂದೆ ಹೋದಾಗ ಮಾತ್ರ ಆ ನರಕದ ಮಾರ್ಗದರ್ಶಿಗೇ ಭಾರೀ ಆಶ್ಚರ್ಯವಾಗತೊಡಗಿತು. ದುರ್ನಾತ ಕಮ್ಮಿಯಾಯಿತು. ಮಸುಕುಮಸುಕು ಬೆಳಕು ಕಾಣಿಸಿದಂತಾಯಿತು. ಸೆಕೆ ಹೋಗಿ ತಂಪು ಹವೆ ಬಂತು. ಇನ್ನೂ ಮುಂದೆ ಹೋದರೆ ಗುಲಾಬಿ ವಾಸನೆ ಮೂಗಿಗೆ ತಟ್ಟಿತು. ಮತ್ತೂ ಮುಂದೆ ರಸ್ತೆಗಳು ಅಗಲವಾಗಿ ಸ್ವಚ್ಛವಾಗಿ ಎರಡೂ ಕಡೆ ಹೂ ಬಿಡುವ ಸಾಲು ಮರಗಳು. ಎರಡೂ ಕಡೆ ಇಲೆಕ್ಟ್ರಿಕ್ ದೀಪಗಳು. ಅನಂತರ ಕಂಪೌಂಡುಗಳು, ಹೂದೋಟಗಳು, ಅಚ್ಚುಕಟ್ಟಾದ ಮನೆ ಮಠಗಳು, ಎಲ್ಲಿಂದಲೋ ಪಿಟೀಲುಗಳು, ಗಿತಾರುಗಳು, ಪಿಯಾನೋಗಳ ವೃಂದಗೀತಗಳು. ಹೋ! ಇದು ಮೊತ್ಸಾರ್ಟ್, ಇದು ಬಾಕ್, ಇದು ವಾಗ್ನರ್ ಎಂದು ಪಾದ್ರಿಗಳು ಸಂಗೀತವನ್ನು ಗುರುತಿಸಿದರು. ಪಾರ್ಕುಗಳಲ್ಲಿ ಚಂದ ಚಂದದ ಹೆಣ್ಣು ಗಂಡು ವಿಹರಿಸುವುದನ್ನು ಕಂಡರು.

ದೂತನೂ ಪಾದ್ರಿಗಳೂ ಇದನ್ನೆಲ್ಲ ನೋಡುತ್ತ ಸಾಗಿದ್ದಾಗ ಎದುರಿಗೆ ದೂತನ ಪರಿಚಯದ ನರಕದ ಜವಾನನೊಬ್ಬ ಬರುತ್ತಿದ್ದ. ದೂತ, "ಏನು ಮಾರಾಯ! ಇದು ಕಟ್ಟ ಕಡೆಯ ನರಕ ಹೌದೋ ಅಲ್ಲವೋ? ಇಲ್ಲಿ ಸ್ವರ್ಗದಲ್ಲಿಯೂ ತೋರದ ಅಂದಚಂದ ಸುಖಸೌಕರ್ಯ ಹೇಗೆ ಬಂತು?" ಎಂದು ವಿಚಾರಿಸಿದ.

"ಅದರ ಕತೆ ಕೇಳುತ್ತೀಯಾ ಮಾರಾಯ? ಸುಮಾರು ವರ್ಷ ಆಯಿತು. ಭೂಲೋಕದಿಂದ ಬಸ್ಸ್ಯಾಂ ಪೊರ್ಬುಃ ಅಂಬುವ ಒಬ್ಬ ಮನುಷ್ಯನನ್ನು ಎಳಕೊಂಡು ಬಂದು ಇಲ್ಲಿ ತಳ್ಳಿದರು. ಅವನು ಬಂದವನೇ, "ಇಸ್ಸಿಸ್ಸಿ ಇದೆಂಥ ಗಲೀಜು! ಇಲ್ಲಿರುವ ಯಾರಿಗೂ ಮೂಗು ಅನ್ನೋದು ಇಲ್ಲವೇ! ಕೈಕಾಲು ಇಲ್ಲವೇ! ಇದನ್ನೆಲ್ಲ ತಡೆದುಕೊಂಡು ಯಾಕೆ ಕೂತಿದ್ದೀರಿ? ಬನ್ನಿ, ನಾನು ಹೇಳುವುದು

ಕೇಳಿರಿ," ಎಂದು ನರಕದ ಪಾಪಿಗಳನ್ನೆಲ್ಲ ಒಟ್ಟು ಮಾಡಿದನು. ಹಾರೆ, ಗುದ್ದಲಿ, ಬುಟ್ಟಿ, ಹೆಡಿಗೆ ತಂದರು. ಕಸ ಕೊಳಕು ಗೋರಿದರು. ದೂರ ಒಯ್ದು ರಾಶಿ ಹಾಕಿದರು. ನರಕದಲ್ಲಿ ಬೆಂಕಿಗೊಂದು ಕಮ್ಮಿಯೆ? ಬೆಂಕಿ ಹಚ್ಚಿ ಸುಟ್ಟರು. ಆಮೇಲೆ ನೆಲ ಸಮ ಹಸನು ಮಾಡುವುದು ಶುರು. ಹೆಣ್ಣು ಗಂಡು ಬಿಡದೆ ಎಲ್ಲರೂ ಪೊರ್ಬುಳ ಮಾತು ಕೇಳಿ ದೆವ್ವ ಹಿಡಿದವರ ಹಾಗೆ ಗೆಯ್ದರು. ಹಗಲು ರಾತ್ರಿ ಒಂದು ಮಾಡಿದರು. ರಸ್ತೆ ಕಡಿದರು. ಮನೆ ಕಟ್ಟಿದರು. ತೋಟ ಬೆಳೆಸಿದರು. ಮರ ನೆಟ್ಟರು, ಬಾವಿ ತೋಡಿದರು. ಅದಕ್ಕೆ ಏನೋ ಪಂಪು ಅಂತೆ, ಅದನ್ನು ಜೋಡಿಸಿದರು. ಏನೇನೋ ಯಂತ್ರ ಅಂತೆ ಅವುಗಳನ್ನು ತಯಾರು ಮಾಡಿ, ಇಲೆಕ್ಟ್ರಿಕ್ ದೀಪವಂತೆ, ಅದನ್ನು ಹಾಕಿ ಕತ್ತಲೆಯನ್ನು ಬೆಳಗಿಸಿದರು. ಈಗ ಅವರಿಗೆ ಹೆಚ್ಚು ಕೆಲಸ ಇಲ್ಲ. ಪಿಟೀಲು, ಗಿಟಾರ್, ಹಾರ್ಪ್ ಪಿಯಾನೊ ಅಂತ ಏನೇನೋ ಸಪ್ಪಳ ಮಾಡುವ ತಂತಿಯ, ಗಾಳಿಯ ಚರ್ಮದ ಸಾಮಾನು ತಯಾರಿಸಿ ಹಾಡುತ್ತ ಕುಣಿಯುತ್ತ.....

ಹೇಳುತ್ತ ಹೋದಂತೆ ಪಾದ್ರಿಗಳ ಬೆರಳು ಮೂಗಿಗೇರಿತು. ಅಷ್ಟರಲ್ಲೇ ಎದುರಲ್ಲಿ ಯಾರು ಬರಬೇಕು ಅಂತೀರಿ! ಸ್ವಯಂ ಬಸ್ತ್ಯಾಂ ಪೊರ್ಬುಳ "ಅರರೇ ಕ್ರಿಸ್ತುದಾಸ ಪಾದ್ರಿಗಳು!ನಮಸ್ಕಾರ ! ನಮಸ್ಕಾರ! ಈ ನರಕದಲ್ಲಿ ನೀವು ಹೇಗೆ! ಛೇ ಛೇ ಎಣಿಸದ ಘಟನೆ. ಬನ್ನಿ, ಬನ್ನಿ!" ಎಂದು ಕೈ ಹಿಡಿದು ಒಂದು ಮನೆಯೊಳಗೆ ಅವರನ್ನು ಕರೆದುಕೊಂಡು ಹೋದನು. ಗಮಗಮ ಕಾಫಿ ಬಂತು. ಪಾದ್ರಿಗಳು ವಿಸ್ಮಯ ಪಡುತ್ತಿದ್ದಂತೆ, "ಪಾದ್ರಿಗಳೇ ನನಗೆ ಭೂಲೋಕದಲ್ಲಿದ್ದಾಗ, ಕಾಫಿಯ ಹುಚ್ಚು ಜೋರು ಅಲ್ಲವೆ? ಅಲ್ಲಿಂದ ಬರುವಾಗ ಹೇಗೋ ಒಂದಿಷ್ಟು ಊಚು ಕಾಫಿ ಬೀಜ ಕಣ್ಣು ತಪ್ಪಿಸಿ ತಂದಿದ್ದೆ. ಅದನ್ನು ಇಲ್ಲಿ ಬಿತ್ತಿ ಕಾಫಿ ತೋಟ ಮಾಡಿದೆವು. ಅದರದ್ದೇ ಕಾಫಿ ಇದು. ರುಚಿ ನೋಡಿ ಹೇಳಿ ಹೇಗಿದೆ!" ಎಂದನು.

ಕ್ರಿಸ್ತುದಾಸ ಪಾದ್ರಿಗಳು ಕಾಫಿ ಕುಡಿದರು. ನರಕದ್ದೇ ಆದರೂ ದಿವ್ಯವಾಗಿತ್ತು ಅನ್ನದೆ ನಿರ್ವಾಹವಿರಲಿಲ್ಲ. ಗುಣಕ್ಕೆ ಮತ್ಸರವೆ?

ಹೊರಡುವಾಗ ಪಾದ್ರಿಗಳು ಪೊರ್ಬುವಿಗೆ ಹೇಳಿದರು. "ಪೊರ್ಬೋ, ನೀನು ಇದೆಲ್ಲ ಮಾಡಿದ್ದು ನನಗೆ ಸಂತೋಷವೇ. ಆದರೂ ದೇವರನ್ನು ಧಿಕ್ಕಾರ ಮಾಡಿ ಇದೆಲ್ಲ ಸಾಧಿಸಿದ್ದು ನನಗೆ ಸರಿ ಕಾಣುವುದಿಲ್ಲ."

ಹೀಗಂದು ಪಾದ್ರಿಗಳು ಪೊರ್ಬುವಿಗೆ ಇನ್ನಾದರೂ ಸದ್ಬುದ್ಧಿ ಕೊಡುವಂತೆ ಪ್ರಾರ್ಥಿಸಲೆಂದು ಮೊಣಕಾಲು ಊರಿದರು. ಪೊರ್ಬು ನಗುತ್ತ ಅವರ ಕೈಹಿಡಿದೆಬ್ಬಿಸಿ, "ಪಾದ್ರಿಗಳೇ, ಈ ನರಕದಲ್ಲಿ ಬೇರೆ ಏನು ಮಾಡಲಿಕ್ಕೂ ನಿಮಗೆ ಸ್ವತಂತ್ರ ಉಂಟು. ಆದರೆ ದೇವರಿಗೆ ಪ್ರಾರ್ಥನೆ ಮಾಡುವುದು ಮಾತ್ರ ಇಲ್ಲಿ ನಿಷಿದ್ಧ!" ಎಂದು ಹೇಳಿದನು.

❑

---

ಈ ಕಥೆಯ ಸ್ಥೂಲ ರೇಖೆಗಳನ್ನು ನಲವತ್ತೈದು ವರ್ಷಗಳ ಹಿಂದೆ ನನ್ನ ಯಜಮಾನರಾಗಿದ್ದ (ದಿವಂಗತ) ಶ್ರೀನಿವಾಸ ಉಪಾಧ್ಯಾಯ ಪಣಿಯಾಡಿಯವರು ನನಗೆ ಹೇಳಿದ್ದರು. ಅಮೇರಿಕದಲ್ಲಿ ವಿವೇಕಾನಂದರು ಈ ಕಥೆಯನ್ನು ಹುಟ್ಟಿಸಿ ಹೇಳಿದ್ದೆಂದು ಪಣಿಯಾಡಿ ನನಗೆ ಹೇಳಿದ್ದರೂ ಇದಕ್ಕೆ ನಿಜವಾಗಿ ಆ ಅಥವಾ ಬೇರೆ ಮೂಲ ಉಂಟೋ ಸ್ವತಃ ಪಣಿಯಾಡಿಯವರೇ ಅದನ್ನು ಹುಟ್ಟಿಸಿದರೊ ನಾನರಿಯೆ. ಪಣಿಯಾಡಿಯವರು ತುಳು ಭಾಷಾಭಿಮಾನಿಗಳು, ಅದಕ್ಕಾಗಿ ತುಂಬಾ ಕೆಲಸ ಮಾಡಿದವರು. ಅದರಿಂದ ಮೊದಲು ಇದನ್ನು ತುಳುವಿನಲ್ಲಿ ಬರೆದೆ. ಅದರ ಕನ್ನಡ ತರ್ಜುಮೆ ಇದು.

ಪಾ. ವೆಂ. ಆಚಾರ್ಯ

## ೧೦. ಕನಸು

'ಸಾಗರ ತನಯೆ'

ಟಂ-ಟಂ-ಟಂ-ಟಂ-ಟಂ! ಅವಳ ಮನಸಿನ ಒಂದು ಭಾಗ ಗಂಟೆಗಳನ್ನು ಎಣಿಸಿತು. ಆರು ಗಂಟೆ ಹೊಡೆದಿದೆ. Watch your steps! ನಿನ್ನ ಗಂಡ ಇನ್ನೈದು ನಿಮಿಷಗಳಲ್ಲಿ ಬರುತ್ತಾನೆ.

ಸುಚೇತಾ ತತ್ತರಿಸಿ ಎಚ್ಚತ್ತು ಗಡಿಬಿಡಿಯಿಂದ ಎದ್ದು ಕುಳಿತಳು. ಕಣ್ಣು ತಿಕ್ಕಿಕೊಂಡು ಭಯದಿಂದ ಸುತ್ತಲೂ ನೋಡಿದಳು. ಯಾರೂ ಇಲ್ಲ. ಹಾಗಾದರೆ ಅವಳು ಕನಸು ಕಾಣುತ್ತಿದ್ದಳು. ಗೋಡೆಯ ಗಡಿಯಾರದ ಕಡೆ ಕಣ್ಣು ಹಾಯಿಸಿದಳು. ಇನ್ನೂ ಮೂರು ಗಂಟೆ ಮಾತ್ರ. ಅವಳಿಗೆ ನೆನಪಾಯಿತು. ಗೋಡೆಯ ಗಡಿಯಾರ ತಪ್ಪಾಗಿ ಗಂಟೆ ಹೊಡೆಯುತ್ತಿದೆ. ಸರಿ ಮಾಡಿ ಅಂತ ನಾಲ್ಕೈದು ದಿನಗಳಿಂದ ಹೇಳುತ್ತಿದ್ದಾಳೆ. ಸತೀಶ ಮರೆತೇ ಬಿಡುತ್ತಿದ್ದ. ವಿಚಿತ್ರ ಪುರುಷ. ದೊಡ್ಡ ಕೆಲಸ ಏನಾದರೂ ಇದ್ದರೆ ಪಟ್ಟು ಹಿಡಿದು ಮಾಡಿ ಮುಗಿಸುತ್ತಾನೆ. ಇಂಥ ಚಿಲ್ಲರೆ ಕೆಲಸಕ್ಕೆ ಮಹಾ ಮೈಗಳ್ಳ.

ಆದರೆ ತಾನು ಗಾಬರಿಬಿದ್ದು ಎಚ್ಚತ್ತದ್ದೇಕೆ? Watch your steps! ಇನ್ನೈದು ನಿಮಿಷಗಳಲ್ಲಿ ನಿನ್ನ ಗಂಡ ಬರುತ್ತಾನೆ - ಈ ಮಾತುಗಳಷ್ಟೇ ಅವಳಿಗೆ ನೆನಪು. ಗಂಡ ಬಂದರೆ ಹೆದರತಕ್ಕದ್ದೇನಿತ್ತು? ಆರು ಹೊಡೆದಿತ್ತು - ಮೂರೇ ಗಂಟೆಯಾದರೂ. ಆರು ಹೊಡೆದು ಐದು ನಿಮಿಷಕ್ಕೆ ಅವಳ ಗಂಡ ಬರುತ್ತಾನೆ ಯಾವಾಗಲೂ. ಬರುವ ಹೊತ್ತಾಯಿತು ಎಂದದ್ದು ಸರಿಯೇ, ಆದರೆ ಹೇಳಿದ್ದು

ಯಾರು? ತನ್ನ ತಾಯಿಯೆ? ಅಕ್ಕನೇ? ಆದರೆ Watch your steps ಯಾಕೆ? ಅವಳಿಗೊಂದೂ ನೆನಪಾಗಲೊಲ್ಲದು.

ಸುಚೇತಾ ಮಂಚದಿಂದ ಎದ್ದು ಬಾತ್‌ರೂಮಿಗೆ ಹೋದಳು. ನಲ್ಲಿಯಲ್ಲಿ ನೀರು ಬಿಂದು ಬಿಂದು ತೊಟಕಿಕ್ಕುತ್ತಿತ್ತು. ಸತೀಶನಿಗೆ ಹೇಳಿ ಎಂಟು ದಿನವಾಗಿತ್ತು. ಒಂದು ಹೊಸ ವಾಶರ್ ತಂದು ಹಾಕಿ, ನೀರು ತೊಟಕಿಕ್ಕುತ್ತ ಬಚ್ಚಲು ಮನೆ ಸದಾ ತೇವವಾಗಿ ಪಾಚಿ ಬೆಳೆದು ಜಾರುತ್ತದೆ - ಅಂತ. ಇಲ್ಲ. ಇಂಥ ಕೆಲಸ ಮಾಡುವುದು ಅವನಿಗೆ ಸಾಧ್ಯವೇ ಇಲ್ಲ. ಬರುವುದಿಲ್ಲ ಅಂತ ಅಲ್ಲ. ಈ ಸ್ಪ್ರೇ ಬಾತ್ ಅವನೇ ತಂದು ಸ್ವತಃ ಫಿಟ್ ಮಾಡಿಲ್ಲವೆ? ಹೊರಗಿನ ಕಾಲ್‌ಬೆಲ್ ಕೂಡ ಅವನೇ ಮನೆಯಲ್ಲಿದ್ದ ಚೂರುಚೂರು ಸಾಮಾನುಗಳಿಂದ ಸ್ವತಃ ತಯಾರಿಸಿ ಜೋಡಿಸಿದ್ದ. ಆದರೆ ವಾಶರ್ ಸಣ್ಣದಾಗ ರಿಪೇರಿ ಮಾಡಿಸಬೇಕಾದರೆ ಘನಘೋರ ಕಾಲಗಮೇ ಆಗಬೇಕು.

ಸುಚೇತಾ ಮುಖ ತೊಳೆದುಕೊಂಡಳು. ಎಪ್ರಿಲ್ ತಿಂಗಳ ಬಿಸಿಲಲ್ಲಿ ಮಾಡುವುದಕ್ಕೇನೂ ಇಲ್ಲದೆ, ನಿದ್ದೆ ಮಾಡಿ ಎದ್ದಿದ್ದ ಅವಳ ಚಿತ್ತ -ಶರೀರಗಳ ಮಬ್ಬು ತಿಳಿಯಾದಂತೆ ಅನಿಸಿತು. ಅಲ್ಲೇ ಇದ್ದ ಕನ್ನಡಿಯಲ್ಲಿ ಮುಖ ನೋಡಿಕೊಂಡಳು. ಎಸಳಾದ ಕೆಂದುಟಿಗಳ ಮೇಲೆ ಅವಳ ಕಣ್ಣು ಹೋಯಿತು. ತುಟಿಗಳಲ್ಲಿ ಏನದು ಸಂವೇದನೆ? ಆಗವಳಿಗೆ ಹಠಾತ್ತಾಗಿ ನೆನಪಿನಲ್ಲಿ ಮಿಂಚಿತು - ಇಡೀ ಕನಸು. ಸುಚೇತಾ ಲಜ್ಜೆಯಿಂದ, ಆತ್ಮ ಜುಗುಪ್ಸೆಯಿಂದ ತಬ್ಬಿಬ್ಬಾದಳು.

ಹೌದು. ಅವಳಿಗೆ ಕನಸಿನಲ್ಲಿ ಯಾರೋ ಮುತ್ತಿಟ್ಟಿದ್ದರು. ಗಂಡಸು. ಆದರೆ ತನ್ನ ಗಂಡನಲ್ಲ. ಯಾರೋ ಯಾಕೆ? ಅವಳ ಗೆಳತಿ ಅನುಪಮಳ ಗಂಡ ವಿಲಾಸ. ಅನುಪಮಳ ಮನೆಯಲ್ಲೇ ಪಾರ್ಟಿಶನ್ ಆಚೆಗೆ ಹಾಸಿಗೆಗಳನ್ನು ಇಡಲು ಮಾಡಿದ ಸಂದಿಯ ಮೂಲೆಯಲ್ಲಿ ಅವಳನ್ನು ಹಿಡಿದು ಎರಡೂ ಗಲ್ಲಗಳನ್ನು ಎರಡೂ ಅಂಗೈಗಳಲ್ಲಿ ಒತ್ತಿ ಹಿಡಿದುಕೊಂಡು ತುಟಿಗಳ ಮೇಲೆ ಬಿಸಿಯಾದ ಮುತ್ತನ್ನು ಒತ್ತಿದ್ದ.

ನೆನೆದು ಸುಚೇತಾ ನಾಚಿ ಹೇಸಿಕೊಂಡಳು. ಅವಳಿಗೆ ಯಾರೋ ಮುತ್ತಿಟ್ಟಿದ್ದರು. ಗಂಡಸು. ಗಂಡನಲ್ಲ. ಪರಪುರುಷ. ಕನಸಿನಲ್ಲಿ, ನಿಜ. ಆದರೆ ಅವಳು ಪ್ರತಿಭಟಿಸಿದ್ದಳೇ? ಕೂಗಿದ್ದಳೇ? Kiss me, stranger ಎಂದು

ಮೃದುವಾಗಿ ಹೇಳಿದಂತಾಗಿತ್ತು. ಯಾರು? ತಾನೆಯೋ? ನೆನಪಾಗುವುದಿಲ್ಲ. ಆದರೆ ವಿಲಾಸ ಅಂಗೈಗಳಲ್ಲಿ ಗಲ್ಲಗಳನ್ನು ಹಿಡಿದು ಅವಳ ಕಣ್ಣುಗಳಲ್ಲಿ ಕಣ್ಣು ನೆಟ್ಟಾಗ ಖಂಡಿತ ಆ ಶಬ್ದಗಳು, ಹೆಣ್ಣು ದನಿಯಲ್ಲಿ ಅವಳಿಗೆ ಕೇಳಿಸಿದ್ದವು. ಕನಸಿನಲ್ಲಾದರೇನಾಯಿತು. ಅವಳಿಗೆ ಆ ಕಣ್ನೋಟ, ಆ ಬಿಸಿಯಾದ ಮುತ್ತು ಬೇಡವಾಗಲಿಲ್ಲ.

ಛೀ! ತನಗಿದೇನಾಗಿದೆ? ಆ ಸ್ವಪ್ನ ಚುಂಬನದ ಅನುಭವ ಇನ್ನೂ ತನ್ನ ತುಟಿಗಳ ಮೇಲೆ ಹಸಿಯಾಗಿದೆ. ಸುಚೇತಾ ತುಟಿಗಳನ್ನು ಹಿಂಗೈಯಿಂದ ಒರಸಿಕೊಂಡಳು. ಆದರೆ ಅಳಿಸಲಾರದ ಮಸಿಯ ಮುದ್ರೆಯ ಹಾಗೆ ಅದು ತುಟಿಗೆ ಅಂಟಿಕೊಂಡಂತಿದೆ. ಮತ್ತೆ ಅಸಹ್ಯವೆಂದರೆ, ತನಗೆ ಆ ಅನುಭವ ಹಿತವಾಗಿತ್ತು. ಈಗಲೂ ಅದರ ನೆನಪು ಹಿತವೆನಿಸುತ್ತಿದೆ.

ಬಿಸಿಯಾದ ಮುತ್ತನ್ನು ಒತ್ತಿದ್ದ. ಆ ಕ್ಷಣಕ್ಕೆ ಗಡಿಯಾರದಲ್ಲಿ ಆರು ಹೊಡೆದಿತ್ತು. ಯಾರೋ ಅವಳನ್ನು ಎಚ್ಚರಿಸಿದ್ದರು. ಗಂಡ ಬರುವ ಹೊತ್ತಾಯಿತು. Watch your steps. ಹೆದರಿ ಎಚ್ಚತ್ತಿದ್ದಳು. ಅನುಪಮಳ ಹಾಸಿಗೆಯ ಸಂದಿಯಲ್ಲಲ್ಲ, ತನ್ನದೇ ರೂಮಿನಲ್ಲಿದ್ದಳು. ಮೂರು ಗಂಟೆಯಾಗಿತ್ತಷ್ಟೇ. ಮೂರಕ್ಕೇ ಆರು ಹೊಡೆದಿತ್ತು.

ಯಾಕೋ ಸುಚೇತಾಗೆ ಗಡಿಯಾರದ ಮೇಲೆ ಸಿಟ್ಟು ಬಂತು. ಇದಕ್ಕೆ ಗಂಟೆ ಹೊಡೆಯುವ ಅವಸರ ಏನಿತ್ತು? ಅನಂತರ ಅವಳಿಗೆ ತನ್ನೀ ಕೋಪದ ಅರ್ಥ ಹೊಳೆದು ತನ್ನ ಮೇಲೆಯೇ ಘೋರವಾದ ಕೋಪ ಬಂತು. ನಿದ್ರಾಭಂಗ ಮಾಡಿದ ಗಡಿಯಾರದ ಮೇಲೆಯೇ ಅವಳಿಗೆ ಸಿಟ್ಟು ಬಂದದ್ದೇಕೆ? ಆ ಚುಂಬನ ಸುಖ ಇನ್ನೂ ಕೆಲ ಕಾಲ ಮುಂದುವರಿದಿದ್ದರೆ ಚೆನ್ನಾಗಿತ್ತು ಎಂದಲ್ಲವೇ? ಹೇಸಿ! ಹೇಸಿ! ತಾನು ಹೇಸಿಯಾಗಿ ಹೋಗಿದ್ದೇನೆ! ಉಗ್ರವಾಗಿ ಅವಳು ತುಟಿಗಳನ್ನು ತಿಕ್ಕಿಕೊಂಡಳು.

ಸುಚೇತಾ ಆತ್ಮಜುಗುಪ್ಸೆಯಲ್ಲೇ ಬಾತ್‌ರೂಮಿನಿಂದ ಹೊರಗೆ ಬಂದಳು. ಅಡಿಗೇ ಮನೆಗೆ ಹೋದಳು. ನಿದ್ದೆಯಾದ ಮೇಲೆ ಒಮ್ಮೆ ಕಾಫಿ ಮಾಡಿ ಕುಡಿಯುವುದು ಅವಳ ಪಾಡಿಕೆ. ಆಮೇಲೆ ಗಂಡ ಬರುವ ಹೊತ್ತಿಗೆ ಏನಾದರೂ ತಿಂಡಿ ಮತ್ತು ಕಾಫಿ ಮಾಡುವುದು. ಆದರೆ ಈ ದಿನ ಅವಳಿಗೆ ತನಗಾಗಿ ಕಾಫಿ

ಮಾಡಿಕೊಳ್ಳಲು ಮನಸಾಗಲಿಲ್ಲ. ಅಡಿಗೆ ಮನೆ ದಾಟಿ ಬೆಡ್ ರೂಮಿಗೆ ಹೋಗಿ ಮಂಚದ ಮೇಲೆ ಕುಸಿದು ಕುಳಿತಳು.

ಅವಳ ಚಿತ್ತಶಾಂತಿ ಕಲಕಿ ಹೋಗಿತ್ತು. ಮಂಚದ ತಲೆದೆಸೆಗಿದ್ದ ಟೇಬಲಿನಿಂದ ಒಂದು ಕಾದಂಬರಿ ತೆಗೆದು ಓದಲು ಯತ್ನಿಸಿದಳು. ಇಲ್ಲ, ಮನಸ್ಸು ಏಕಾಗ್ರವಾಗಲೊಲ್ಲದು. ಪುನಃ ಪುನಃ ಕನಸಿನ ನೆನಪು ಮರುಕಳಿಸುತ್ತಿತ್ತು. ತನ್ನ ಗೆಳತಿಯ ಗಂಡನಿಂದ ಅವಳು ಮುತ್ತಿರಿಸಿಕೊಂಡಿದ್ದಳು. ಆತನ ತುಟಿಗಳು ಇನ್ನೂ ತುಸು ಹೊತ್ತು ತನ್ನ ತುಟಿಗಳ ಮೇಲೆ ಒತ್ತಿದ್ದರೆ ಚೆನ್ನಾಗಿತ್ತು ಎಂದು ಬಯಸಿದ್ದಳು.

ಎಣಿಸಿದಷ್ಟೂ ಅವಳ ಬುದ್ಧಿ ಪಶ್ಚಾತ್ತಾಪ ಪಡುತ್ತಿತ್ತು. ಮದುವೆಯಾಗಿ ಕಳೆದ ನಾಲ್ಕು ವರ್ಷಗಳಿಂದ ಅವಳು ಮಾಡಿದ ಅಸಂಖ್ಯ ಗಳಿಗೆಗಳ ನಿದ್ರೆಯಲ್ಲಿ ಒಮ್ಮೆಯಾದರೂ ಸತೀಶನ ವಿಷಯದಲ್ಲಿ ಅವಳಿಗೆ ಇಂಥ ಕನಸು ಬಿದ್ದಿರಲಿಲ್ಲ. ಅವಳ ಆತ್ಮಾವಹೇಳನೆ ಇನ್ನಿಷ್ಟು ತೀವ್ರವಾಯಿತು. ದೇವಾ! ತನ್ನ ಗಂಡನನ್ನು ತಾನು ಪ್ರೀತಿಸುತ್ತಿಲ್ಲ. ಯಾರೋ ಒಬ್ಬರೊಡನೆ ವಿಲಾಸ ಮಾಡಲು ಬಯಸುತ್ತಿದ್ದೇನೆ.

ಕನಸಿನಲ್ಲೇ ಆದರೂ ತನಗೆ ಇಂಥ ಪಾಪಬುದ್ಧಿ ಏಕೆ ಬರಬೇಕು? ತನ್ನ ಕುಲದಲ್ಲೇ ಚರಿತ್ರ ಕೆಟ್ಟ ಹೆಂಗಸರಿಲ್ಲವಲ್ಲ. ತನ್ನ ತಾಯಿ ಸೀತಾದೇವಿಯ ಹಾಗಿದ್ದಾರೆ. ಇಂದಿಗೂ ಮುಂಜಾನೆ ಎದ್ದ ಕೂಡಲೆ ಗಂಡನ ಪಾದ ಮುಟ್ಟಿ ನಮಸ್ಕರಿಸದೆ ಬೇರಾವ ಕೆಲಸಕ್ಕೂ ಹೋಗುವುದಿಲ್ಲ. ತನ್ನ ಅಕ್ಕನೋ! ಏಳರಲ್ಲಿ ಗಂಡ ತೀರಿದರೆ ಈ ಯುಗದಲ್ಲಿಯೂ ಅತ್ತೆ ಮಾವ ತಂದೆಯರ ಮಾತೂ ಕೇಳದೆ ತಲೆ ತೆಗೆಸಿಕೊಂಡು ಬಿಳಿ ಸೀರೆಯುಟ್ಟು ಏಕಭುಕ್ತ ಜೀವನ ಮಾಡುತ್ತಿದ್ದಾಳೆ. ಗಂಡನ ಚಿತ್ರಕ್ಕೆ ಹೂವಿಡದೆ ಅವಳು ಬಾಯಲ್ಲಿ ನೀರು ಹಾಕುವುದಿಲ್ಲ. ತನ್ನ ಮನಸ್ಸು ಮಾತ್ರ ಹೀಗೇಕೆ ಕೊಳಚೆಯಲ್ಲಿ ಬೀಳುತ್ತಿದೆ? ದೇವಾ! ನಾನು ನರಕಕ್ಕೆ ಇಳಿಯುತ್ತಿದ್ದೇನೆಯೆ?

ಸುಚೇತಾ ಜಗ್ಗನೆದ್ದು ಹೋಗಿ ಟ್ರಂಕ್ ತೆರೆದು ಅದರಲ್ಲಿದ್ದ ಗಂಡನ ಫೋಟೋ ತೆಗೆದುಕೊಂಡು ಬಂದಳು. ಅದರ ಮುಖದ ಮೇಲೆಯೆ ಕಣ್ಣಿಟ್ಟು ನೋಡತೊಡಗಿದಳು. ಏನಾಗಿದೆ ಇವರಿಗೆ? ಇವರು ಅನುಪಮಳ ಗಂಡ

ವಿಲಾಸನಿಗಿಂತ ಏನು ಕಡಿಮೆ? ಮುಖ ಎಷ್ಟು ದುಂಡಾಗಿದೆ! ಹಣೆ ಎಷ್ಟು ಹರವಾಗಿದೆ! ದೇಹದಾರ್ಢ್ಯ ಎಂತಹುದು! ಗುಣವೊ! ಎಷ್ಟು ನಯ! ಎಷ್ಟು ದಯ! ತನ್ನ ಪ್ರತಿ ಹುಟ್ಟುಹಬ್ಬಕ್ಕೆ ಉಡುಗರೆ - ಊರಲ್ಲಿ ತಾನು, ಬೊಂಬಾಯಿಯಲ್ಲಿ ಇವರು ಇದ್ದಾಗ ಕೂಡ - ತಪ್ಪಿಸಿದ್ದುಂಟೆ? ತನ್ನ ಮೈಮುಟ್ಟುವಾಗ ಮಲ್ಲಿಗೆ ಹೂವೋ ಎನ್ನುವಂತೆ ಮುಟ್ಟುತ್ತಾರಲ್ಲ. ಮಾತು ಸ್ವಲ್ಪ ಕಡಿಮೆ ಆದರೇನಾಯಿತು? ಅಧಿಕಪ್ರಸಂಗಿ ಅಲ್ಲವಲ್ಲ. ಎಷ್ಟು ಸುರುಚಿ! ಎಷ್ಟು ಔಚಿತ್ಯ! ಈ ಫೋಟೋ ಫ್ರೇಂ ಹಾಕಿಸಿ ಗೋಡೆಗೆ ತೂಗಹಾಕೋಣ ಎಂದಾಗ, "ನನ್ನ ಫೋಟೋ ನನ್ನ ಮನೆಯಲ್ಲೇ ತೂಗಹಾಕೋದು ಒಳ್ಳೇ ರುಚಿಯಲ್ಲ. ನಾಳೆ ನಾನು ಹೋದ ಮೇಲೆ, ನಿನ್ನ ಮಕ್ಕಳಿಗೆ ನನ್ನ ಮೇಲೆ ಗೌರವ ಉಳಿಯೋ ಹಾಗೆ ನಾನು ಇದ್ದರೆ ಆಗ ಅವರು ನನ್ನ ಫೋಟೋ ತೂಗಹಾಕಲಿ, ಸಾಕು" ಎಂದರಲ್ಲ.

ಹೌದು! ನಮ್ಮ ಮಕ್ಕಳು! ಆದರೆ ಅವು ಬರುವ ಲಕ್ಷಣವೇ ಇಲ್ಲವಲ್ಲ. ಮಗು ಬೇಕು ಎನ್ನುವ ವಿಚಾರ ತನಗೂ ನಿನ್ನೇವರೆಗೆ ಅನಿಸಿಯೇ ಇರಲಿಲ್ಲ. ನಿನ್ನೆ ಸಂಜೆ ಅನುಪಮಳ ಮನೆಗೆ ಅವಳ ಮಗುವಿನ ವರ್ಷದ ಹುಟ್ಟುಹಬ್ಬಕ್ಕೆ ಹೋಗಿದ್ದಾಗ ತಾನೇ ತನಗೂ ಒಂದು ಮಗು ಇದ್ದಿದ್ದರೆ ಚೆನ್ನಾಗಿತ್ತು ಅನಿಸಿತ್ತು ಒಂದು ಕ್ಷಣ. ಎಷ್ಟು ಮುದ್ದು ಮಗು. ಥೇಟ್ ತಂದೆಯ ಹಾಗೆಯೇ. ಅಂಗಿ ಟೋಪಿ ಹಾರ ಕೇಯೂರ ಹಾಕಿ ಮಣೇ ಮೇಲೆ ಕೂಡ್ರಿಸಿ ಆರತಿ ಮಾಡುವಾಗಲಾದರೂ ನನಗೆ ಅಷ್ಟಾಗಿ ಅನಿಸಲಿಲ್ಲ. ಆದರೆ ಗೆಸ್ಟ್ಸ್ ಎಲ್ಲ ಹೋದ ಮೇಲೆ ಸೆಕೆಯಿಂದ ಬೆಂದು ಬೆವರಿ ಹೋದ ಮಗುವನ್ನು ಬೆತ್ತಲೆ ಮಾಡಿ ಮೈ ಒರಸುತ್ತಿರುವಾಗ ಮಾತ್ರ ತಾನು ಹುಚ್ಚೆದ್ದು ಹೋಗಿದ್ದಳು. ಅವಳ ಕೈಯಿಂದ ಮಗುವನ್ನು ತೆಗೆದುಕೊಂಡು ಮುತ್ತುಗಳ ಮಳೆಯನ್ನೇ ಕರೆದಿದ್ದಳು. ಅನುಪಮ, "ಮಂದೀ ಮಕ್ಕಳನ್ನೇ ಹೀಗೆ ಹುಚ್ಚು ಹುಚ್ಚಾಗಿ ಮುದ್ದು ಮಾಡುವ ನಿನಗೆ ಸ್ವಂತದ್ದೊಂದು ಆದರೆ ಏನು ಮಾಡೀಯ" ಎಂದು ತನ್ನ ಪಕ್ಕೆ ತಿವಿದು, "ಸತೀಶಣ್ಣಾಗೆ ಹೇಳಲ್ಲ, ಅಷ್ಟು ಆಸೆ ಇದ್ದರೆ" ಎಂದು ಹಾಸ್ಯ ಮಾಡಿದ್ದಳು. ಗೆಳೆಯರನ್ನು ಬಸ್ಸಿಗೆ ಕಳಿಸಿ ಒಳಗೆ ಬರುತ್ತಿದ್ದ ಅವಳ ಗಂಡ ಇದನ್ನು ಕೇಳಿ, "ಓ! ಸತೀಶನಾ! ಅವನು ಬಹಳ ದುರಾಲೋಚನೆಯುವನಪ್ಪಾ. ಮಗನ್ನ ಅಮೇರಿಕಕ್ಕೆ ಕಳಿಸಿ ಸರ್ಜನ್ ಮಾಡೋಕೆ ಇಪ್ಪತ್ತೈದು ಸಾವಿರ ಬ್ಯಾಂಕಿನಲ್ಲಿ

ಡಿಪಾಜಿಟ್ ಮಾಡಿಡದೆ ಅವನೇನು ಮಗನ್ನ ಹಡಿಯೋವನಲ್ಲ" ಎಂದ. ಸುಚೇತಾ ನಾಚಿ ಕೆಂಪಾಗಿದ್ದಳು.

ವಿಲಾಸನ ವಿಚಾರ ಬಂದೊಡನೆ ಸುಚೇತಾ ತುಟಿಗಳನ್ನು ಮತ್ತೊಮ್ಮೆ ಒರಸಿಕೊಂಡಳು. ಅವನ ಟೇಬಲ್ ಮೇಲೆ Kiss me stranger ಎಂಬ ಕಾದಂಬರಿ ಇದ್ದದ್ದು ಅವಳಿಗೆ ಸಹಸಾ ನೆನಪಿಗೆ ಬಂತು. ಆ ಮೇಲೆ ಗಂಡನ ಚಿತ್ರವನ್ನು ನೋಡುತ್ತಾ, "ಅಯ್ಯೋ ನನಗೆ ನಿಮ್ಮ ಕನಸು ಯಾಕೆ ಬೀಳೋದಿಲ್ಲ, ಯಾಕೆ ಬೀಳೋದಿಲ್ಲ" ಎಂದು ತನ್ನೊಳಗೇ ಮರುಕದಿಂದ ಹಲುಬಿದಳು. ತನ್ನ ಗಂಡನಿಗೆ ತಾನು ಘೋರ ದ್ರೋಹ ಬಗೆಯುತ್ತಿರುವಂತೆ ಅವಳಿಗೆ ಅನಿಸಿತು. ಇದಕ್ಕೆ ತಾನು ತಕ್ಕ ಪರಿಹಾರ ಕೊಡಲೇಬೇಕು. ತಾನು ಹೃತ್ಪೂರ್ವಕ ಗಂಡನನ್ನು ಪ್ರೀತಿಸಬೇಕು. ಎಷ್ಟು ಒಳ್ಳೆಯವರು.

ಸತೀಶ ೬ ಹೊಡೆದು ೫ ನಿಮಿಷಕ್ಕೆ ಸರಿಯಾಗಿ ಮನೆಯಲ್ಲಿ ಪ್ರವೇಶಿಸಿದಾಗ ಅವನಿಗಾಗಿ ಇಂದು ಕಾದಿದ್ದ ಆದರವೇ ಬೇರೆ. ಅವನ ಬೂಟಿನ ದಾರ ಬಿಚ್ಚಲು ಸುಚೇತಾ ಓಡಿಬಂದಳು. ಅವನು ಬಚ್ಚಲಿಗೆ ಹೋಗಿ ಕೈ ಕಾಲು ಮುಖ ತೊಳೆದುಕೊಂಡು ಹೊರಬರುವಾಗಲೇ ಸುಚೇತಾ ಮುನ್‌ಸೂಚನೆ ಇಲ್ಲದೆ ಅವನನ್ನು ಬರಸೆಳೆದು ಕೊರಳಿಗೆ ತೆಕ್ಕೆಬಿದ್ದು ಮುಖದ ಮೇಲೆಲ್ಲ ಮುತ್ತಿನ ಮಳೆ ಕರೆದಳು. ಎಂದೂ ಇಲ್ಲದ ಈ ಪ್ರೇಮವರ್ಷಣದಿಂದ ಹರ್ಷಕ್ಕಿಂತ ಆಶ್ಚರ್ಯವೇ ಹೆಚ್ಚಾದ ಸತೀಶ, "ಏನಿದು, ಈವೊತ್ತು ಎಂದಿಲ್ಲದ ದಯೆ ಬಂದಿರೋದು ಬಡವನ ಮೇಲೆ?" ಎಂದ.

"ಏನೂ ಇಲ್ಲ" ಎಂದಳು ಸುಚೇತಾ. "ಯಾವಾಗಲೂ ನೀವು ಕೇಳದೆ ನಾ ಕೊಡೋದಿಲ್ಲ. ಈವೊತ್ತು ನಾನಾಗಿ ಕೊಡೋಣ ಅನಿಸಿತು ಅಷ್ಟೆ." ಆಮೇಲೆ ಅವನಿಗೆ ಪ್ರಿಯವಾದ ಬೋಂಡಾ, ಗಮಗಮಿಸುವ ಕಾಫಿ ಬಂತು. ಸುಚೇತಾ ಹತ್ತಿರವೇ ಕೂತು ತಿನ್ನಿ ತಿನ್ನಿ ಎಂದು ತಿನ್ನಿಸಿದಳು.

ಅವನು ಕೈ ತೊಳೆಯುವ ಪುರಸೊತ್ತಿಲ್ಲದೆ, "ಏಳಿ, ಬೀಚ್ ಕಡೆ ತಿರುಗಾಡಿಕೊಂಡು ಬರುವಾ. ಈವೊತ್ತು ಹಾಲು ಬೆಳದಿಂಗಳಿದೆ. ಟ್ಯಾಕ್ಸಿ ಮಾಡಿಕೊಂಡು ಹೋಗುವಾ. ಯಾಕೊ ಈವೊತ್ತೆ ನಿಮ್ಮ ಸಂಗಡ ತಿರುಗಾಡಲು ಹೋಗಲೇಬೇಕು ಅನಿಸುತ್ತದೆ. ದಯವಿಟ್ಟು" ಎಂದಳು.

ಟ್ಯಾಕ್ಸಿಯ ಹಿಂದಿನ ಸೀಟಿನಲ್ಲಿ ಸತೀಶನಿಗೆ ಬಹಳ ಒತ್ತಿ ಕುಳಿತು ಅವನ ಕೈಯನ್ನು ಬಿಗಿಯಾಗಿ ಹಿಡಿದುಕೊಂಡಿದ್ದಳು ಸುಚೇತಾ. ಟ್ಯಾಕ್ಸಿಯವ ಕನ್ನಡಿಯಲ್ಲಿ ಇದನ್ನು ಕಂಡು ಯಾವ ಅರ್ಥದಲ್ಲೋ ನಸುನಗು ನಕ್ಕ. ಏನೂ ಎಣಿಸಿಕೊಳ್ಳಲಿ ತನಗೇನು? ಬೀಚಿನಲ್ಲಿ ಅವಳು ಅವನ ಕೈ ಹಿಡಿದುಕೊಂಡೇ ನಡೆದಳು. ಸತೀಶ ಅಪ್ರತಿಭನಾಗಿಯೇ ಅವಳೊಡನೆ ಸಾಗಿದ.

ರಾತ್ರಿ ಅವಳ ಇಷ್ಟದಂತೆ ಯಾವುದೋ ಹೋಟೆಲಿನಲ್ಲಿ ಊಟ ಮುಗಿಸಿ ಮನೆಗೆ ಮರಳಿದ್ದಾಯಿತು. ಒಳಗೆ ಬಂದವಳೇ ಬಾಗಿಲು ಹಾಕಿಕೊಂಡು ಅವಳು ಸತೀಶನನ್ನು ಹಿಡಿದು ಮತ್ತೊಮ್ಮೆ ಮುತ್ತುಗಳಿಂದ ಅವನನ್ನು ಮುಚ್ಚಿದಳು. ಆ ಮೇಲೆ ಒಯ್ಯಾರದಿಂದ "ಹೆಂಗಸು ಪ್ರೀತಿಸಬೇಕೆಂದರೆ ಹೇಗೆ ಪ್ರೀತಿಸುತ್ತಾಳೆ ಗೊತ್ತಾ ನಿಮಗೆ?" ಎಂದು ಕೇಳಿದಳು.

"ಇಲ್ಲ. ನಾನು ನೋಡಿದ್ದು ನಿನ್ನೊಬ್ಬಳನ್ನೇ. ಅಷ್ಟೇ ಸಾಕು ನನಗೆ" ಎಂದ ಸತೀಶ.

"ಹಾಗಾದರೆ ಇವೊತ್ತು ನೋಡಿ, " ಎಂದು ಅವಳು ಒಳಗೆ ಹೋದಳು. ಕೈಕಾಲು ತೊಳೆದುಕೊಂಡು ಅಡಿಗೆಯ ಮನೆಯ ಮೂಲೆಯಲ್ಲಿ ತೂಗಹಾಕಿದ್ದ ರಾಮಪಂಚಾಯತನ ಚಿತ್ರದ ಮುಂದೆ ದೀಪ ಹಚ್ಚಿಟ್ಟು ಸುದೀರ್ಘವಾಗಿ ನೆಲಕ್ಕೆ ಹಣೆ ಕೊಟ್ಟು ಪ್ರಾರ್ಥಿಸಿದಳು. ಕೊನೆಗೆ "ದೇವಾ, ನಾನು ಕನಸಿನಲ್ಲಿ ನನ್ನ ಗಂಡನನ್ನೇ ಕಾಣುವಂತೆ ಮಾಡು" ಎಂದು ಬೇಡಿಕೊಂಡಳು.

▲▲▲

ಐದು ಗಂಟೆಗೆ ಸತೀಶನಿಗೆ ಬಿಕ್ಕಿ ಬಿಕ್ಕಿ ಅಳುವ ಸ್ವರ ಕೇಳಿ ಎಚ್ಚರವಾಯಿತು. ಆತ ಕೈಯಾಡಿಸಿದ. ಸುಚೇತಾ ಮಲಗಿರಲಿಲ್ಲ. ಕುಳಿತು ಅಳುತ್ತಿದ್ದಳು. ಅವಳನ್ನು ಎಳೆದು ಮಲಗಿಸಿಕೊಂಡು ಅವಳ ಮೃದುವಾದ ಮೈಮೇಲೆಲ್ಲ ಕೈಯಾಡಿಸುತ್ತ ಸತೀಶ ಕೇಳಿದ : "ಏನು?ಏನಾಯಿತು? ಯಾಕೆ ಅಳುತ್ತಿ? ಹುಚ್ಚೀ! ಕೆಟ್ಟ ಕನಸೇನಾದರೂ ಬಿತ್ತೆ?"

ಸುಚೇತಾ ಬಿಕ್ಕುತ್ತ, "ನಿಮಗೆ ಗೊತ್ತಾಗೋಲ್ಲ. ನಿಮ್ಮನ್ನು ಹಿಡಿದು ಹೃದಯದಲ್ಲಿ ತುಂಬಿಕೊಳ್ಳಬೇಕೆಂದು ನಾನೆಷ್ಟು ಪ್ರಯತ್ನಿಸುತ್ತೇನೆ! ಆದರೆ ನೀವು ನನ್ನನ್ನು ಬಿಟ್ಟು ತಪ್ಪಿಸಿಕೊಂಡು ದೂರ ಓಡುತ್ತಿದ್ದೀರಿ," ಎಂದಳು. ❑

# ೧೧. ಒಬ್ಬ ಸ್ವಾಮಿಗಳ ಕಥೆ

ಒಂದೂರು

- ಯಾವೂರು?

- ಯಾವೂರಾದರೂ ಅಷ್ಟೇ. ನಾನು ಹೇಳೋ ಕಥೆಗೆ ವ್ಯತ್ಯಾಸ ಆಗೋದಿಲ್ಲ.

- ಹೋಗಲಿ ಯಾವ ದೇಶ?

- ಅದೂ ಅಷ್ಟೇ. ಆದರೂ ಈ ಪುಣ್ಯಭೂಮಿಯಾದ ಭಾರತವರ್ಷೇ ಭರತಖಂಡೇ ಅಂತಿಟ್ಟುಕೋ ಬೇಕಾದರೆ.

- ಆಗಲಿ. ಭಾರತವರ್ಷೇ ಭರತಖಂಡೇ ಗೋದಾವರ್ಯಾದಕ್ಷಿಣೇ ಪಾರ್ಶ್ವೇ.... ಒಂದೂರು.

- ಹೌದು ಆ ಊರಲ್ಲಿ ಒಂದು ಮಠ.

- ಒಂದೇ ಮಠವೇ?

- ಹಾಗೆ ಆ ಊರಲ್ಲಿ ಸುಮಾರು ಮಠಗಳು. ನಾನು ಹೇಳೋದು ಒಂದು ಮಠದ ಸಮಾಚಾರ.

- ಯಾವಾಗಿನದು?

- ಯಾವಾಗಿನದಾದರೂ ಅಷ್ಟೇ ಅಂದೇನು. ಆದರೂ ಇದು ನಡೆದದು ಸುಮಾರು ನೂರೈವತ್ತು ವರ್ಷಗಳ ಹಿಂದೆ.

- ನೂರೈವತ್ತು ವರ್ಷಗಳ ಹಿಂದೆ ಮುಂದೆ?

- ಆ ಮಠಕ್ಕೊಬ್ಬ ಸ್ವಾಮಿಗಳು.

- ಮಠಕ್ಕೊಬ್ಬ ಸ್ವಾಮಿ ಇರಲೇಬೇಕಲ್ಲ, ನೂರೈವತ್ತಿರಲಿ, ಮುನ್ನೂರೈವತ್ತು ವರ್ಷಗಳ ಹಿಂದಿರಲಿ.

- ಹೌದು, ಇದ್ದರು. ಇಪ್ಪತ್ತೆಂಟು ಇಪ್ಪತ್ತೊಂಬತ್ತು ವರ್ಷ ಅವರಿಗೆ ಒಂದು ದಿವಸ ಏನಾಯಿತು ಅಂದ್ರೆ ,

- ಏನಾಯಿತು ?ದಿಗ್ವಿಜಯ ಹೊರಟರೆ?

- ಇಲ್ಲ ಇಲ್ಲ. ದಿಗ್ವಿಜಯ ಹೊರಡುವ ಅಗತ್ಯ ಅವರಿಗಿರಲಿಲ್ಲ. ಹಿಂದಿನ ಮಠಾಧಿಪತಿಗಳು ಗಳಿಸಿಟ್ಟ ಆಸ್ತಿ ಧಾರಾಳ ಇತ್ತು.

- ಆದರೆ ಮತಪ್ರಚಾರ ಮಾಡಬೇಕಲ್ಲ ಸ್ವಾಮಿಗಳು ಅಂದ ಮೇಲೆ?

- ಅದರ ಅಗತ್ಯವೂ ಇರಲಿಲ್ಲ. ಅವರ ಆದಿ ಗುರುಗಳು, ಪೂರ್ವಗುರುಗಳು ಸಾಕಷ್ಟು ಮತಪ್ರಚಾರ ಮಾಡಿದ್ದರು. ಪರಮತ ಖಂಡನೆಯ ಸ್ವಮತ ಮಂಡನೆಯ ಪುಸ್ತಕಗಳನ್ನು ಬರೆದಿಟ್ಟಿದ್ದರು. ಅವರ ಮತದ ಹಾದಿ ನಿಃಶಲ್ಯವಾಗಿತ್ತು. ಇವರು ಹಿಂದಿನವರು ಬರೆದದ್ದನ್ನೆಲ್ಲ ಪಾಠ ಹೇಳಿಸಿಕೊಂಡಿದ್ದರು. ಅಪ್ಪಿತಪ್ಪಿ ಯಾರಾದರೂ ವಾದಕ್ಕೆ ಬಂದರೆ ಎದುರಿಸುವ ಶಕ್ತಿ ಇತ್ತು. ಆದರೆ ಯಾರೂ ಬರುತ್ತಿರಲಿಲ್ಲ. ಇವರಾಗಿ ಕಾಲುಕೆದರಿ ಯಾರನ್ನೂ ಕರೆಯುತ್ತಿರಲಿಲ್ಲ.

- ಹಾಗಾದರೆ ಹಾಯಾಗಿ ಮಠದಲ್ಲಿ ಉಂಡುಟ್ಟು ಉಣಿಸಿ ಉಡಿಸಿ ಇರಬಹುದಿತ್ತಲ್ಲ. ಕಥೆ ಯಾಕಾಯಿತು?

- ಸ್ವಲ್ಪ ತಾಳಯ್ಯ. ಸುಖವಾಗಿಯೇ ಇದ್ದರು. ಆದರೆ ಒಂದು ದಿನ ಅವರಿಗೆ-

- ಹೋ! ಒಂದು ಹೆಣ್ಣಿನ ಹುಚ್ಚು ಹಿಡಿಯಿತು. ಅಲ್ಲವೇ?

- ಸ್ವಲ್ಪ ತಾಳೋ ಮಾರಾಯ. ನನಗೆ ಹೇಳಲಿಕ್ಕೆ ನೀನು ಬಿಡೋದಿಲ್ಲವಲ್ಲ.

- ಆಗಲಿ, ಹೇಳಿ ಅಪ್ಪ.

- ಒಂದು ದಿನ ಏನಾಯಿತು ಅಂದ್ರೆ, ಅವರಿಗೆ ಒಂದು ಮದುವೆ ನೋಡಬೇಕೂ ಅಂತ ಆಸೆ ಆಗಿಬಿಟ್ಟಿತು.

- ಎಲಾ ಇವರ? ಮದುವೆ ನೋಡಬೇಕು ಅಂದ್ರೆ ಅದೇನು ಮಹಾ? ಕಥೆ. ಏನಂತೆ ಅದರಲ್ಲಿ? ಅಷ್ಟಿದ್ದರೆ ನೋಡಿಬಿಡಬಹುದಿತ್ತು -

- ಅದೇ ಈಗ. ಅವರ ಸಮಾಜದಲ್ಲಿ ಸನ್ಯಾಸಿಗಳು ಮದುವೆಗೆ ಬಂದರೆ ಅಮಂಗಳ. ಈಗ ಕೂಡಾ ಹಾಗೇ ಇದೆ.

- ಒಳ್ಳೇ ತಮಾಷೆಯಾಗಿದೆ. ಆದರೆ ಮದುವೆ ನೋಡಬೇಕೆಂಬ ಆಸೆ ಸ್ವಾಮಿಗಳಿಗೆ ಯಾಕೆ ಹುಟ್ಟಬೇಕಾಗಿತ್ತು?

- ಸತ್ಯ ಅಂದರೆ ಅವರು ಎಂದೂ ಮದುವೆ ನೋಡಿರಲಿಲ್ಲ. ಅಥವಾ ನೋಡಿದ ನೆನಪು ಅವರಿಗಿರಲಿಲ್ಲ. ಆದ್ದರಿಂದ.

- ಏನ್ ಹೇಳ್ತೀರಾ? ಮದುವೆ ನೋಡದವರೂ ಉಂಟೇ?

- ನೋಡು, ಅವರಿಗೆ ಏಳು ವರ್ಷ ನಡೀತಾ ಇದ್ದಾಗ ಸನ್ಯಾಸ ದೀಕ್ಷೆ ಆಗಿತ್ತು. ಅವರಿಗೆ ಅಕ್ಕಂದಿರು, ಅಣ್ಣಂದಿರು ಇರಲಿಲ್ಲವಾಗಿ ಸರಿಯಾಗಿ ಬುದ್ಧಿ ಬಂದ ಮೇಲೆ ಮದುವೆ ನೋಡೋ ಪ್ರಸಂಗ ಬಂದಿರಲಿಲ್ಲ. ಆಶ್ರಮವಾದ ಮೇಲಂತೂ ಯಾವ ಮದುವೆಗೂ ಹೋಗೋ ಹಾಗಿರಲಿಲ್ಲ.

- ಪಾಪ ಪಾಪ. ಆದರೆ ಈಗ ಅವರಿಗೆ ಒಮ್ಮೆಲೇ ಮದುವೆ ನೋಡುವ ಹುಚ್ಚು ಯಾಕೆ ಹಿಡೀತು?

- ಹುಚ್ಚು ಅಂಬೋದು, ಯಾಕೆ ಏನು ಅಂತ ಕೇಳಿ ಹಿಡಿಯುತ್ತೇನಯ್ಯ? ಮಠದಲ್ಲಿ ಅವರ ಸಹಪಾಠಿಗಳು ಪರಿಚಾರಕರು ಇರುತ್ತಿದ್ದರು. ಅವರಲ್ಲಿ ಒಬ್ಬೊಬ್ಬರಿಗೆ ಮದುವೆ ಆಗುತ್ತಿದ್ದುದನ್ನು ಸ್ವಾಮಿಗಳು ಗಮನಿಸುತ್ತಿದ್ದರು. ಮದುವೆ ಅಂತ ಹೇಳುವಾಗ ಅವರ ಸಂಭ್ರಮ, ಕಣ್ಣಿನ ಹೊಳಪು ನೋಡಿ ಸ್ವಾಮಿಗಳಿಗೆ ಕುತೂಹಲ ಆಗುತ್ತಿತ್ತು ಅಂತ ತೋರುತ್ತೆ. ಒಂದು ದಿವಸ ಅದು ಉತ್ಕಟ ಹಂಬಲವಾಗಿ ಬಿಟ್ಟಿತು.

- ಪಾಪ! ಆಮೇಲೇನಾಯಿತು?

- ಬಹಳ ದಿನ ಅದನ್ನು ಹತ್ತಿಕ್ಕಿಕೊಂಡಿದ್ದರು ಅನ್ನು. ಒಂದು ದಿನ ತಡೆಯಲಾರದೆ ತಮ್ಮ ಅಂತರಂಗ ಪರಿಚಾರಕನಿಗೆ ದುಂಬಾಲು ಬಿದ್ದರು.

- ಅಂದರೆ ಗಿಂಡೀಮಾಣಿಗೆ ಗಂಟು ಬಿದ್ದರು-

- ಗಿಂಡೀಮಾಣಿ ಗುಂಡೀಮಾಣಿ ಅಂತ ಹೇಳಿ ಇಂಥಾ ಮತ ಅಥವಾ ಪಂಗಡದವರು ಅಂತ ಬೊಟ್ಟಿಟ್ಟು ತೋರಿಸೋಕೆ ನನಗೆ ಮನಸ್ಸಿಲ್ಲ. ಕಥೆಗೆ ಅದು ಅಗತ್ಯ ಇಲ್ಲ.

- ಆಗಲಿ. ಮುಂದೆ?

- ಮಠಾಧಿಪತಿ, ವಿದ್ವಾಂಸ ಅನಿಸಿಕೊಂಡ ಸ್ವಾಮಿಗಳು ಪರಿಚರ್ಯೆಯವನ ಮುಂದೆ ತನಗೊಂದು ಮದುವೆ ಹೇಗಾದರೂ ಮಾಡಿ ತೋರಿಸಬೇಕೆಂತ ಗೋಗರೆದರು. ಅವನು ಆಗಲಿ ನೋಡುವ ಅಂತ ಮುಂದೆ ಹಾಕುತ್ತಲೇ ಇದ್ದ. ದುಡುಕುವ ಹಾಗಿರಲಿಲ್ಲವಲ್ಲ. ಅಮಂಗಳದ ಭಯ ಒಂದು ಕಡೆ. ಗುರುತು ಹಿಡಿದಾರೆಂಬ ಶಂಕೆ ಇನ್ನೊಂದು ಕಡೆ. ಪೈಕಿಯವರಲ್ಲಿನ ಮದುವೆಗೆ ಕರೆದೊಯ್ಯೋದು ಅಪಾಯಕರವಾಗಿತ್ತು.

- ಅಲ್ಲವೇ ಮತ್ತೆ?

- ಕಡೆಗೊಂದು ದಿನ ಆರೆಂಟು ಮೈಲು ದೂರದಲ್ಲಿ ಅವನ ಪರಿಚಯದ ಬ್ರಾಹ್ಮಣರ ಮನೆಯಲ್ಲಿ ನಡೆಯಲಿದ್ದ ಮದುವೆಗೆ ಕರೆದುಕೊಂಡು ಹೋಗೋದೂಂತಾಯಿತು. ಈ ಗುಟ್ಟು ಮುಂದೆ ಯಾರಿಗೂ ಹೇಳಬಾರದೂಂತ ಪರಿಚಾರಕನಿಂದ ಮಠದ ನರಸಿಂಹ ದೇವರ ಆಣೆ ಹಾಕಿಸಿಕೊಂಡರು. ರಾತ್ರಿಯ ಮದುವೆ ಆದ್ದರಿಂದ ಸಿಕ್ಕಿ ಬೀಳೋ ಸಂಭವ ಕಮ್ಮಿ. ಇಂದಿನ ಹಾಗೆ ಇಲೆಕ್ಟ್ರಿಕ್ ದೀಪದ ಝಗಝಗ ಬಿಡು, ಗ್ಯಾಸ್ ದೀಪದ ಸುದ್ದಿಯೂ ಇಲ್ಲದ ಕಾಲ ನೋಡು. ಮಿಣಿ ಮಿಣಿ ದೀಪಗಳು.

- ಆದರೆ ಸ್ವಾಮಿಗಳ ಬೋಳುಮಂಡೆ, ಜನಿವಾರ ಇಲ್ಲದಿರೋದು ತೊಡಕು ಆಗಲಿಲ್ಲವೆ?

- ಹಾಗೆ ಪರಿಚಾರಕ ಚತುರ. ಅವನು ಸ್ವಾಮಿಗಳಿಗೆ ಮೀಸೆ ಹಚ್ಚಿದ. ನವಿರಾದ ಕಾಶ್ಮೀರ ಶಾಲಿನ ಮುಂಡಾಸು ಸುತ್ತಿದ. ಕಚ್ಚೆಹಾಕಿ ಕಂಬಿ(ಧೋತಿ) ಉಡಿಸಿದ. ಜನಿವಾರಕ್ಕೊಂದು ನೂಲು ಹಾಕಿದ. ಭವ್ಯವಾಗಿ ಶಾಲು ಹೊದಿಸಿದ.

ಬೇಗ ರಾತ್ರಿ ಪೂಜೆ ಮುಗಿಸಿ ಸ್ವಾಮಿಗಳು ತಮ್ಮ ಮಲಗುವ ಕೋಣೆಯಲ್ಲಿ ಏವಂ ವಿಶಿಷ್ಟ ವೇಷಧಾರಿಗಳಾಗಿ ಹಿತ್ತಲ ಬಾಗಿಲಿನಿಂದ ಪರಿಚಾರಕನ ಸಂಗಡ ಸದ್ದಿಲ್ಲದೆ ಹೊರಬಿದ್ದು ಮದುವೆಯ ಊರಿಗೆ ಗುಡ್ಡೆ, ಗದ್ದೆ, ಬಯಲುದಾರಿ ಹಿಡಿದು ನಡೆದೇ ಹೋದರು.

- ಅವರು ಎಂದೂ ಅಷ್ಟು ದೂರ ನಡೆದಿರಲಿಕ್ಕಿಲ್ಲ ಅಲ್ಲವೆ?

- ಈಗಿನ ಹಾಗೆ ಆಗ ಕಾರು ಗೀರುಗಳು ಇದ್ದಿಲ್ಲಪ್ಪಾ. ಸ್ವಾಮಿಗಳಿಗೂ ಆಗ ಅಷ್ಟಿಷ್ಟು ನಡೆದು ಅಭ್ಯಾಸ ಇರುತ್ತಿತ್ತು. ದೂರದ ಪ್ರಯಾಣಗಳಿಗೇನೋ ಡೋಲಿ ಬಳಸುತ್ತಿದ್ದರು. ಆದರೂ ಈ ರಾತ್ರಿಯಾನ, ಕಲ್ಲುಮುಳ್ಳು ಮೆಟ್ಟೋದು ಅವರಿಗೆ ಸ್ವಲ್ಪ ಕಷ್ಟವಾಗಿರಬೇಕು.

- ಆಮೇಲೆ?

- ಆಮೇಲೇನು? ಸರಿಯಾದ ಹೊತ್ತಿಗೆ ಮದುವೆ ಮನೆ ಸೇರಿದರು. ಈ ಭರ್ಜರಿ ಅಪರಿಚಿತ ಯಾರಂತ ಪ್ರಶ್ನೆ ಏಳೋದಕ್ಕೆ ಮೊದಲೇ ಬುದ್ಧಿವಂತ ಪರಿಚಾರಕ ತಿಳಿಸಿಕೊಟ್ಟ. ಇವರು ಕಾಶೀ ಕಡೆ ವಿದ್ವಾಂಸರು. ನಮ್ಮ ಸ್ವಾಮಿಗಳ ಗುರುಗಳು ಕಾಶಿಗೆ ಹೋಗಿದ್ದಾಗ ಇವರ ಹಿರಿಯರ ಸ್ನೇಹ ಆಗಿತ್ತಂತೆ. ಈಗ ಇವರು ದಕ್ಷಿಣಾಪಥದ ಯಾತ್ರೆಗೆ ಬಂದವರು. ತಮ್ಮ ತೀರ್ಥರೂಪರ ಆಜ್ಞೆ ಪ್ರಕಾರ ನಮ್ಮ ಮಠಕ್ಕೂ ಬಂದಿದ್ದರು. ನಮ್ಮ ಕಡೇ ಮದುವೆ ಸಂಪ್ರದಾಯ ಹೇಗೆ ಇರುತ್ತೇ ಅಂತ ಕುತೂಹಲಪಟ್ಟಿದ್ದರಿಂದ ಸ್ವಾಮಿಗಳು ನನ್ನ ಜತೆ ಇಲ್ಲಿ ಕಳಿಸಿದರು. ಕಾಶೀಭಾಷೆ ಮತ್ತೆ ಸಂಸ್ಕೃತ ಮಾತ್ರ ಗೊತ್ತು ಪಾಪ ಅವರಿಗೆ. ಹೀಗೆ ಏನೇನೋ ಪಟಾಕಿ ಹಾರಿಸಿದ. ಹಿಂದೀ ಬಲ್ಲವರು ಅಲ್ಲಿ ಯಾರೂ ಇರಲಿಲ್ಲ ಪುಣ್ಯಕ್ಕೆ. ಸಂಸ್ಕೃತ ಬಲ್ಲವರೂ ಆ ಕೊಂಪೇಲಿ ಒಬ್ಬರೋ ಇಬ್ಬರೋ. ವೃದ್ಧ ಪಂಡಿತರೊಬ್ಬರನ್ನು ಕರೆತಂದು ಮಾತಾಡಿಸಿದರು. ಆದರೆ ಬಾಯಿ ಬಿಟ್ಟರೆ ಬಣ್ಣಗೇಡು ಅಂಬೋ ಗಾದೆ ನೆನೆದು ಸ್ವಾಮಿಗಳು ಮಿತಭಾಷಣಕ್ಕೆ ಮಾದರಿ ಎನಿಸಿದರು. ಸಂಭಾಷಣೆ ಅಪಾಯಕರ ಅನಿಸೋ ಹಾಗೆ ಬೆಳೀಲಿಲ್ಲ.

- ಅಂತೂ ಬಚಾವಾದರೂ ಅನ್ನಿ.

- ಹೌದು, ಸ್ವಲ್ಪದರಲ್ಲಿ. ಆ ಊರಲ್ಲಿ ಕಾಶಿಗೆ ಎಷ್ಟೋ ಸಲ ಹೋಗಿ ಬಂದವರು ಒಬ್ಬರು ಇದ್ದರಂತೆ. ಅವರಿಗೇನೋ ಅಸ್ವಸ್ಥವಾಗಿ ಈ ಮದುವೆಗೆ ಬಂದಿರಲಿಲ್ಲ. ಬಂದಿದ್ದರೆ ತಡ ಇಲ್ಲದೆ ಇವರ ಬಣ್ಣ ಬಯಲಾಗುತ್ತಿತ್ತು. ಅಂತ ಅನಂತರ ಸ್ವಾಮಿಗಳ ಖಾಸಾ ಪರಿಚಾರಕ ಹೇಳಿ ನಕ್ಕನಂತೆ.

ಸರಿ. ಮಂಟಪದ ಹತ್ತಿರವೇ ಈ ಕಾಶೀ ಪಂಡಿತರಿಗೆ ಪೀಠ ಹಾಕಿ ಕೂರಿಸಿದರು. ಇವರು ಮದುವೇನೆಲ್ಲ ನೋಡಿದರು. ಹತ್ತು ವರ್ಷದ ಕನ್ಯೆ, ಹದಿನೆಂಟರ ವರ. ಮದುವೇನ ಸಾಂಗೋಪಸಾಂಗವಾಗಿ ನೋಡಿದರು. ಬೇರೇ ಸಂಗತಿಗಳನ್ನೂ ನೋಡಿದರು. ಮದುವೆ ಮುಗಿದ ನಂತರ ವಾಪಸ್ಸು ಬಂದುಬಿಟ್ಟರು. ಬೆಳಗ್ಗಾಗೋದರೊಳಗೆ ಅದೇ ಹಿಂಬಾಗಿಲಿಂದ ಮಠ ಸೇರಿದರು....

- ಸೈ? ಇಷ್ಟೇನಾ?

- ಇಷ್ಟೇ ಆದರೂ ಸಾಲದೆ? ಇದು ಕಥೆ ಆಗಲಿಲ್ಲವೆ?

ನಾನು ಮಿಕಿಮಿಕಿ ನೋಡಿದೆ.

- ಇಷ್ಟೇ ಆದರೂ ಸಾಲುತ್ತಿತ್ತು. ಆದರೆ ಇನ್ನೂ ಬೇಕಾದರೆ ಸ್ವಲ್ಪ ಹೇಳುತ್ತೇನೆ.

- ಹಾಂ ಹೇಳಿ.

- ವಾಪಸ್ಸು ಬರುವಾಗ ಸ್ವಾಮಿಗಳು ಗಾಢ ವಿಚಾರದಲ್ಲಿದ್ದ ಹಾಗೆ ಕಾಣಿಸಿತು. ಇನ್ನೊಬ್ಬರ ಒಂದು ಗುಟ್ಟು ನಮ್ಮ ಕೈಲಿ ಸಿಕ್ಕಿದರೆ ಅವರ ಜುಟ್ಟು ನಮ್ಮ ಕೈಲಿ ಸಿಕ್ಕಿದ ಹಾಗಲ್ಲವೇ? ಸ್ವಾಮಿಗಳಿಗೆ ಜುಟ್ಟು ಇಲ್ಲ ಅನ್ನು. ಆದರೂ ಅವರ ಆಪ್ತ ಸೇವಕ ಹೋಗುವಾಗಿಗಿಂತ ಬರುವಾಗ ಹೆಚ್ಚು ಸ್ವಾತಂತ್ರ್ಯ ವಹಿಸಿ ಸ್ವಾಮಿಗಳ ಸಂಗಡ ಕುಚೇಷ್ಟೆ ಮಾತಾಡುತ್ತಾ ಇದ್ದ. ಅವರು ಮಾತ್ರ ಏಕಪದಗಳಲ್ಲಿ ಉತ್ತರಿಸುತ್ತ ಇದ್ದರು.

- ಮದುವೆ ಸರಿಯಾಗಿ ನೋಡಿದಿರಾ ಸ್ವಾಮಿ?

- ನೋಡಿದೆ.

- ಏನು ನೋಡಿದಿರಿ ಬುದ್ಧಿ?

- ನೋಡತಕ್ಕದ್ದನ್ನೆಲ್ಲ ನೋಡಿದೆ.

.......

- ಮದುವೆ ಸಭೇಲಿ ನೀವೇ ಎಲ್ಲರಿಗಿಂತ ಸುಂದರ ಆಗಿದ್ದೀರಿ ಅಂತ ಗಮನಿಸಿದಿರಾ?

- ನೀನೇ ಹೇಳಬೇಕು.

- ಎಲ್ಲರ ಕಣ್ಣೂ ಪುನಃ ಪುನಃ ನಿಮ್ಮ ಕಡೆಗೇ ತಿರುಗುತ್ತಿದ್ದವು ಅಂತ ಗಮನಿಸಿದಿರಾ?

- ಇರಬಹುದು.

- ಜವ್ವನಗಿತ್ತೇರು ಒಂದಲ್ಲ ಒಂದು ನೆವದಿಂದ ನಿಮ್ಮ ಹತ್ತಿರ ಸುಳಿದು ಕಣ್ಣು ಹಾಕುತ್ತಿದ್ದರಲ್ಲ?

- ಹೌದೇ, ಅವರೆಲ್ಲ ಗಂಡಂದಿರುಳ್ಳವರಲ್ಲವೆ? ಅವರಿಗೆ ನನ್ನಂಥ ಪರದೇಶಿ ಮೇಲೆ ಎಂಥ ಆಸಕ್ತಿ? ಎಂದು ಹೇಳಿ ಸ್ವಾಮಿಗಳು ನಕ್ಕ ಹಾಗೆ ಮಾಡಿದರು.

- ಹೋ! ನಿಮಗೆ ಗೊತ್ತಿಲ್ಲ ಬುದ್ಧಿ. ಮದುವೆ ಮನೇಲಿ ಹೆಂಗಸರಿಗೆ ಹೆಚ್ಚು ಸ್ವಾತಂತ್ರ್ಯ ಇರುತ್ತೆ. ಪರಗಂಡಸರ ಹತ್ತಿರ ಸರಸ ಮಾಡಿ ದಕ್ಕಿಸಿಕೊಳ್ಳುತ್ತಾರೆ.

ಸ್ವಾಮಿಗಳು ಏನೂ ಹೇಳಲಿಲ್ಲ. ಸ್ವಲ್ಪ ಹೊತ್ತು ಮೌನ. ದಾರಿ ತೀರ ಮೆಲ್ಲಗೆ ಸವೆಯುತ್ತಾ ಇದೆ ಅನ್ನಿಸಿತು ಅಂತರಂಗ ಸೇವಕನಿಗೆ.

- ಒಂದು ಗಾದೆ ಕೇಳಿದ್ದೀರಾ ಬುದ್ಧಿ?

- ಏನು?

- ಮದುವೆ ಮನೇಲಿ ಮಿಂಡ ಸಮ್ಮಾನ ಅಂತ?

- ಕೇಳಿಲ್ಲಪ್ಪ.

- ಅಂಥ ಸಮ್ಮಾನ ಬುದ್ಧಿಯೋರಿಗೂ ಸಿಕ್ಕಿತು ಅಲ್ಲವೆ? ಪರಿಚಾರಕ ಸ್ವಲ್ಪ ಗಟ್ಟಿಯಾಗಿ ನಕ್ಕ.

- ಏನನ್ನೋದು ನೀವು? ಸ್ವಾಮಿಗಳು ಗಡುಸಾಗಿ ಹೇಳಿದರು.

- ಹೌದು ಬುದ್ಧಿ, ಒಂದಲ್ಲ ಒಂದು ನೆವದಿಂದ ಹತ್ತಿರ ಸುಳಿದು ಸ್ವಾಮಿಗಳ ಮೇಲೆ ಸೆರಗು ಹಾಯಿಸುತ್ತಿದ್ದಳಲ್ಲ ಚದುರೆ ಅವಳು ಯಾರು ಗೊತ್ತ?

- ಇಲ್ಲ.

- ನಿಮ್ಮ ಹತ್ತಿರ ಸಂಸ್ಕೃತದಲ್ಲಿ ಮಾತಾಡಿದರಲ್ಲ ಆ ಮುದಿ ಪಂಡಿತರ ಎರಡನೇ ಹೆಂಡತಿ ಅವಳು.

- ಹುಂ

- ಸ್ವಾಮಿಗಳು ಮದುವಣಿಗರಿಗೆ ಮಂತ್ರಾಕ್ಷತೆ ಹಾಕೋಕೆ ಎದ್ದು ನಿಂತಾಗ ನುಗ್ಗಲಿನಲ್ಲಿ ಅವಳು ಬೇಕಂತೇ ಬಂದು ನಿಮಗೆ ಮೈ ತಗಲಿಸಿ ಹೋದಳಲ್ಲ.

ಸ್ವಾಮಿಗಳು ಮೌನವಾಗಿದ್ದರು. ಅವರಿಗೆ ಪ್ರೋತ್ಸಾಹ ಕೊಡೋದು ಅವರಿಗೆ ಬೇಡವಾಗಿತ್ತೋ ಏನೋ. ಪರಿಚಾರಕ ನಕ್ಕ.

- ಸ್ವಾಮಿಗಳು ಊಟ ಮಾಡೋಲ್ಲ ಅಂತ ಯಜಮಾನನಿಗೆ ಸನ್ನೆಯಿಂದ ಹೇಳಿದಾಗ ಅವನು ಸ್ವಲ್ಪ ಹಾಲು ಹಣ್ಣಾದರೂ ತೆಗೆದುಕೊಳ್ಳಬೇಕಂತ ಒತ್ತಾಯ ಮಾಡಿದನಲ್ಲ. ಅವನು ಅಷ್ಟು ಹೇಳಿದ್ದೇ ತಡ, ಅವಳು ಓಡಿಹೋಗಿ ಹಾಲು, ಹಣ್ಣು, ಸಕ್ಕರೆ ತಂದು ನಿಮ್ಮ ಮುಂದೆ ಇಟ್ಟಳು. ಅದಕ್ಕೇ ಹೇಳಿದೆ ಮದುವೆ ಮನೇಲಿ ಅಂಬೋ ಗಾದೆ.

ಸ್ವಾಮಿಗಳು ಮಾತಾಡಲಿಲ್ಲ. ಅವರು ತಮ್ಮೊಳಗೇ ತಮ್ಮನ್ನ ಸೇರಿಕೊಂಡ ಹಾಗಿತ್ತು. ಮುಂದೆ ಅಂತರಂಗ ಪರಿಚಾರಕ ಬೇಸರ ಕಳೆಯೋಕೆ ಆಗಾಗ್ಗೆ ಚಟಾಕಿ ಹಾರಿಸುತ್ತಲೇ ಇದ್ದ. ಸ್ವಾಮಿಗಳು ಯಾವ ಪ್ರತಿಕ್ರಿಯೆಯನ್ನೂ ತೋರಿಸಲಿಲ್ಲ. ಅವರು ಕೇಳಿಸಿಕೊಳ್ಳುತ್ತಿದ್ದರೋ ಇಲ್ಲವೋ ಅನಿಸುತ್ತಿತ್ತು. ಒಮ್ಮೆ ಒಂದು ತೆಂಗಿನಮರದಿಂದ ಗೂಬೆಯೊಂದು ಗೂಂ ಅಂತ ಕೂಗಿದಾಗ ಅವರು ಬೆಚ್ಚಿಬಿದ್ದ ಹಾಗೆ ಮಾಡಿ ಒಂದು ನಿಮಿಷ ಶಬ್ದ ಬಂದ ದಿಕ್ಕನ್ನೇ ದಿಟ್ಟಿಸುತ್ತ ನಿಂತರು. ಮಠ ತಲಪುವವರೆಗೂ ಅವರು ಸಂವಾದದಲ್ಲಿ ಸೇರಲಿಲ್ಲ.

- ಆಮೇಲೆ ಏನಾಯಿತು?

- ಮೊದಲೇ ಹೇಳಿದೆನಲ್ಲ. ಏನೂ ಆಗಲಿಲ್ಲ. ಆದರೆ ಎಲ್ಲವೂ ಆಯಿತು.

ಪರಿಚಾರಕನಿಗೆ ಮಠ ಸೇರಿದ ಮೇಲೆ ಸ್ವಲ್ಪ ಭಯವಾಯಿತು. ಸ್ವಾಮಿಗಳು ಪುನಃ ಪುನಃ ಮದುವೆ ನೋಡಬೇಕು ಅಂದರೇನು ಗತಿ ಅಂತ? ಹಾಗೇನೂ ಆಗಲಿಲ್ಲ. ಆದರೆ ಸ್ವಾಮಿಗಳು ಹಿಂದಿನ ಸ್ವಾಮಿಗಳಾಗಿ ಉಳಿಯಲಿಲ್ಲ.

- ಏನು ಬದಲಾವಣೆ ಆಯಿತು?

- ಸ್ವಾಮಿಗಳು ಹೆಚ್ಚು ಹೆಚ್ಚು ಅಂತರ್ಮುಖಿಗಳಾಗುತ್ತ ಹೋದರು. ಗೀತೆ ಉಪನಿಷತ್ತುಗಳ ಅಧ್ಯಯನದಲ್ಲಿ ಮುಳುಗಿದರು. ಆದರೂ ಅವರ ಮನಸ್ಸು ಏನನ್ನೋ ಕಳೆದುಕೊಂಡಂತೆ ಇರುತ್ತಿತ್ತು. ಒಂದೊಂದು ಸಲ ಅವರು ಅಪ್ರಚೋದಿತವಾಗಿ "ನಿಗ್ರಹಃ ಕಿಂ ಕರಿಷ್ಯತಿ" ಅಂತ ತಮ್ಮೊಳಗೇ ಅಂಬೋ ಹಾಗೆ ಅಂದು ಕೊಳ್ಳುತ್ತಿದ್ದರು. ಹೆಂಗಸರ ಕಣ್ಣು ತಪ್ಪಿಸುತ್ತಿದ್ದರು ಅಂತಲೂ ಅನಿಸುತ್ತಿತ್ತು.

- ಪಾಪ ಪಾಪ.

- ಒಂದು ಸಲ ಅವರು ತುಂಬಾ ಗಾಬರಿ ಆದರಂತೆ. ಅವರು ನೋಡಿ ಬಂದಿದ್ದ ಮದುವೆಯ ವರನಿಗೆ ಕಸ್ತ್ ಕಾಯಿಲೆ ಅಂತ ಸುದ್ದಿ ಬಂತಂತೆ. ಆಗ ಸ್ವಾಮಿಗಳ ಮನಃಶಾಂತಿ ತೀರ ಕದಡಿತಂತೆ. ತಾನು ಮದುವೆಗೆ ಹೋದ ಅಮಂಗಳದಿಂದ ಹೀಗಾಯಿತೋ ಏನೋ ಅಂತ ಪರಿಚಾರಕನಿಗೆ ಹೇಳಿದರಂತೆ. ಇನ್ನೊಮ್ಮೆ ಏನಪ್ಪಾ, ನನ್ನಿಂದ ಬ್ರಹ್ಮಹತ್ಯೆ ಆಗುತ್ತಿದೆಯೆ? ಅಂತಲೂ ಹೇಳಿದರಂತೆ. ಅವನಿಗೆ ಗುಣವಾಯಿತೆಂಬ ಸುದ್ದಿ ಬಂದಾಗ - ನರಸಿಂಹಾ ಕಾಪಾಡಿದಿಯಾ! - ಅಂತ ನಿಟ್ಟುಸಿರು ಬಿಟ್ಟರಂತೆ.

ಅವರ ಅನ್ಯಮನಸ್ಕತೆ ಹಾಗೇ ಉಳಿಯಿತು. ಮತ್ತೇನೂ ವ್ಯತ್ಯಾಸ ಇರಲಿಲ್ಲ. ಹೌದು, ಬರಬರುತ್ತ ಅವರು ಮೃದುವಾದರಂತೆ. ಮಠದ ಪರಿವಾರದವರ ಸುಖದುಃಖಗಳ ಬಗ್ಗೆ ಬಹಳ ಕಾಳಜಿ ಮಾಡುತ್ತಿದ್ದರು. ಒಳ್ಳೇ ಹೆಸರು ಕೇಳಿ ಐವತ್ತೈದನೇ ವಯಸ್ಸಿಗೆ ಕಾಲವಾದರು.

..........

ಸ್ವಲ್ಪ ಸಪ್ಪಗಿನ ಅಂತ್ಯವಾಯಿತಲ್ಲ ಕಥೆಗೆ?

- ಹೌದು. ಸತ್ಯಕಥೆಗಳೆಲ್ಲ ಸಪ್ಪಗೆ ಅಂತ್ಯವಾಗೋದು. ಆದರೆ ಒಂದು ಮಾತು ಹೇಳೋದು ಉಳಿಯಿತು.

- ಏನು?

- ಅವರು ಕಡೆಯ ಎರಡು ಮೂರು ವರ್ಷ ಅಸ್ವಸ್ಥದಲ್ಲಿ ಇದ್ದರು. ಬಂಧುಗಳೂ, ಶಿಷ್ಯರೂ ಉತ್ತರಾಧಿಕಾರಿಗಳಿಗೆ ಆಶ್ರಮ ಕೊಡಬೇಕೂಂತ ಒತ್ತಾಯಿಸುತ್ತಿದ್ದರು. ಆದರೂ ಕಡೆಗೂ ಯಾರಿಗೂ ತಲೆ ಬೋಳಿಸದೆಯೆ ಸ್ವಾಮಿಗಳ ಕಾಲವಾದರು.

ನಾನು ಸುಮಾರು ಹೊತ್ತು ಕಥೆ ಹೇಳಿದ ಮುದುಕರ ಕಡೆ ನೋಡುತ್ತ ಕುಳಿತೆ. ಕಡೆಗೆ ಕೇಳಿದೆ.

- ಹೌದು ಸ್ವಾಮಿ? ಇದು ನೂರೈವತ್ತು ವರ್ಷ ಹಿಂದಿನ ಸತ್ಯಕಥೆ ಅಂದಿರಿ. ಅದಷ್ಟು ಹಿಂದಿನ ಸತ್ಯಕಥೆ ಆ ಗಿಂಡೀಮಾಣಿಗೆ - ಅಥವಾ ಪರಿಚಾರಕನಿಗೆ ಹೊರತು ಯಾರಿಗೂ ಗೊತ್ತಿಲ್ಲದ್ದು ನಿಮಗೆ ಹ್ಯಾಗಪ್ಪ ಇಷ್ಟು ವಿವರವಾಗಿ ತಿಳಿಯಿತು?

- ಅದೇ? ಆ ಪರಿಚಾರಕ ನನ್ನ ಮುತ್ತಜ್ಜ. ಸ್ವಾಮಿಗಳು ಕಾಲವಾಗೋವರೆಗೂ ಅವರು ಅದನ್ನು ಯಾರಿಗೂ ಹೇಳಲಿಲ್ಲ. ಆಮೇಲೆ ಯಾವಾಗಲೋ ನನ್ನಜ್ಜನಿಗೆ ಹೇಳಿದರಂತೆ.

❑

## ೧೨. ವಾಕಿಂಗ್ ಸ್ಟಿಕ್ಕಿನ ಪ್ರಕರಣ

ಲಿಪ್ಪರಿ ಕೌನ್ಸಿಲ್ಲಿನ ಹಿರಿಯ ಸದಸ್ಯರೊಬ್ಬರು ಒಂದು ದಿನ ಸಂಜೆ ಮನೆಗೆ ಮರಳಿ ತಮ್ಮ ವಾಕಿಂಗ್ ಸ್ಟಿಕ್ಕನ್ನು (ಊರುಗೋಲು) ಅದರ ಸ್ಥಾನದಲ್ಲಿ ನಿಲ್ಲಿಸಲು ಹೋದಾಗ ಅದು ಅವರ ಕೈಯಲ್ಲಿರಲಿಲ್ಲ. ಅದನ್ನವರು ಕಚೇರಿಯಲ್ಲೇ ಮರೆತು ಬಂದಿದ್ದರು. ಮೊದಲು ಅವರಿಗೆ ಕಚೇರಿಯ ಸಾರ್ಜಂಟನ ಮೇಲೆ ಬ್ರಹ್ಮಾಂಡ ಸಿಟ್ಟು ಬಂತು. ಅದನ್ನು ಬಿಟ್ಟು ಬರಲು ಬಿಟ್ಟದ್ದಕ್ಕಾಗಿ. ಆದರೆ ಆಗಲೇ ಮೇಜಿನ ಮೇಲೆ ಅವರ ಊಟ ಸಿದ್ಧವಾಗಿದ್ದುದರಿಂದ ಸಿಟ್ಟು ತೋಡಿಕೊಳ್ಳಲು ಅವಕಾಶ ಸಾಲಲಿಲ್ಲ. ಅದನ್ನವರು ನಾಳೆಗೆ ಮುಂದೂಡಿ ಊಟಕ್ಕೆ ಕುಳಿತರು. ಆದರೂ ತುತ್ತಿಗೊಮ್ಮೆ ಅವರಿಗೆ ತಮ್ಮ ಊರುಗೋಲಿನ ನೆನಪು ಬರುತ್ತಲೇ ಇತ್ತು. ತಮ್ಮಂಥ ಇಳಿವಯಸ್ಸಿನವರು ಅದಿಲ್ಲದೆ ಇಷ್ಟು ದೂರ ನಡೆತರಲು ಹೇಗೆ ಸಾಧ್ಯವಾಯಿತೆಂದು ಆಶ್ಚರ್ಯಪಡುತ್ತಲೇ ಅವರು ಊಟ ಮುಗಿಸಿದರು.

ಮರುದಿನ ಅವರು ತಮ್ಮೀ ಕಥೆಯನ್ನು ಕೌನ್ಸಿಲ್ಲಿನವರಿಗೆಲ್ಲ ಹೇಳಿದರು. ಕೌನ್ಸಿಲ್ಲಿನ ಹಿರಿಯ ಸದಸ್ಯರೆಲ್ಲ ಅವರ ಮೇಲಿನ ಹೊಟ್ಟೆಕಿಚ್ಚಿನಿಂದ ಪಚ್ಚೆಯಾದರು. ತರುಣ ಸದಸ್ಯರು ಅವರನ್ನು ಅಭಿನಂದಿಸಿ ಬೇಗನೇ ಅವರಿಗೆ ಹೊಸ ಹಲ್ಲುಗಳು ಮೊಳೆತು ಕೃತಕ ಹಲ್ಲುಗಳನ್ನು ಅನವಶ್ಯಕವಾಗಿ ಮಾಡುವುದು ಖಂಡಿತ ಎಂದರು.

ಕೌನ್ಸಿಲ್ಲಿನ ಒಬ್ಬ ಸದಸ್ಯರು ಮಾತ್ರ ಈ ವಿನೋದದಲ್ಲಿ ಪಾಲುಗೊಳ್ಳಲಿಲ್ಲ. ಈ ಘಟನೆಯನ್ನು ರಾಜ್ಯದ ಪ್ರಯೋಜನಕ್ಕೆ ಹೇಗೆ

ತಿರುಗಿಸಬಹುದೆಂದು ಚಿಂತಿಸುವುದರಲ್ಲಿ ಅವರು ಮಗ್ನರಾಗಿದ್ದರು. ಕೌನ್ಸಿಲ್ಲಿನ ಸಭೆ ಆರಂಭವಾದ ತತ್‌ಕ್ಷಣ ಅವರು ವೇದಿಕೆಯನ್ನೇರಿದರು. "ಸಜ್ಜನರೇ, ಇತ್ತ ಚಿತ್ತವಿಸುವಂಥವರಾಗಬೇಕು. ನಾನೊಂದು ಸೂಚನೆ ಮಂಡಿಸುತ್ತಿದ್ದೇನೆ" ಎಂದು ಅವರು ಪ್ರಾರಂಭಿಸಿದರು. ಕೆಲ ಸದಸ್ಯರು ಕಿವಿಗೊಟ್ಟರು. ಕೆಲವರು ಮುಖ ಸೊಟ್ಟ ಮಾಡಿಕೊಂಡು ಪ್ರತಿವಾದಕ್ಕೆ ಸಿದ್ಧತೆ ಮಾಡತೊಡಗಿದರು. ಅಷ್ಟರಲ್ಲಿ ಭಾಷಣಕಾರರು ಮುಂದುವರಿಸಿದರು : "ನನ್ನ ಹತ್ತಿರ ಒಂದು ಯೋಜನೆ ಇದೆ. ಅದು ಪರಿಪೂರ್ಣವಾಗಿದೆಯೆಂದು ನನಗೆ ವಿಶ್ವಾಸವಿದೆ. ಮಹನೀಯರೇ, ನೀವು ಉತ್ತರಿಸುವ ಮೊದಲು ಜಾಗರೂಕವಾಗಿ ಯೋಚಿಸಿರಿ. ಮಿತ್ರರೇ, ನಾವು ತೆರಿಗೆ ಹೇರದೆ ಮರೆತು ಬಿಟ್ಟ ಒಂದು ವಸ್ತು ಯಾವುದು? ತಮ್ಮ ಪೌರ ಕರ್ತವ್ಯದಲ್ಲಿ ತಪ್ಪುವವರು ಸಾರ್ವಜನಿಕ ಜಿಗಳೆಗಳೆನಿಸುತ್ತಾರೆ. ನಾವು ವಾಕಿಂಗ್ ಸ್ಟಿಕ್ಕುಗಳ ಮೇಲೆ ತೆರಿಗೆ ಹೇರಲು ಮರೆತಿದ್ದೇವೆ. ಸದ್ಗೃಹಸ್ಥರೇ, ಆದ್ದರಿಂದ ಇನ್ನಾದರೂ ಅವುಗಳ ಮೇಲೆ ಕರಭಾರ ಹೇರಬೇಕೆಂದು ನಾನು ಸೂಚಿಸುತ್ತೇನೆ. ನಾವು ಎಲ್ಲಾ ಉಪಯೋಗಿ ವಸ್ತುಗಳ ಮೇಲೆ ಕರ ಹೇರಿದ್ದೇವೆ. ವಾಕಿಂಗ್ ಸ್ಟಿಕ್ಕುಗಳು ಕನ್ನಡಕಗಳಿಗಿಂತ ಏನು ಮಹಾ ? ಕನ್ನಡಕಗಳ ಮೇಲೆ ನಾವು ಕರ ಹೇರಿದ್ದೇವೆ. ಕೃತಕ ಹಲ್ಲುಗಳಿಗೂ ತೆರಿಗೆ ವಿಧಿಸಿದ್ದೇವೆ. ವಾಕಿಂಗ್ ಸ್ಟಿಕ್ಕುಗಳಿಗೆ ಕೃತಕ ಹಲ್ಲುಗಳಿಗಿಂತ ಹೆಚ್ಚುಗಾರಿಕೆಯೇನು? ಹಾಗೇನಾದರೂ ಇದ್ದರೆ ಅವುಗಳ ಮೇಲೆ ಹೆಚ್ಚೇ ತೆರಿಗೆ ಬೀಳಬೇಕು. ನನ್ನ, ತಮ್ಮ ಅಭಿಪ್ರಾಯದಲ್ಲಿ ವಾಕಿಂಗ್ ಸ್ಟಿಕ್ಕು ಕೂಡ ಒಂದು ಮನುಷ್ಯೋಪಯೋಗಿ ಸರಕು; ಆ ದೃಷ್ಟಿಯಿಂದ ಅದರ ಮೇಲೆ ತೆರಿಗೆ ಬೀಳಬೇಕು. ಇದು ನನ್ನ ಹೇಳಿಕೆಯ ಸಾರಾಂಶ. ನನ್ನ ಸೂಚನೆಯಲ್ಲಿರುವ ವಿವೇಕ ಚರ್ಚಾತೀತವಾಗಿದ್ದರೂ ಈ ಸಭೆಯ ಸಂಪ್ರದಾಯದಂತೆ ಅದನ್ನು ಅಲ್ಲಿ ಚರ್ಚೆಗೆ ಮಂಡಿಸುತ್ತಿದ್ದೇನೆಂದಷ್ಟೇ ನಾನು ಹೇಳಬಯಸುತ್ತೇನೆ."

ಈ ಸೂಚನೆಯಿಂದ ಕೌನ್ಸಿಲ್ಲಿನ ಮೇಲೆ ಬರಸಿಡಿಲೆರಗಿದಂತಾಗಿಬಿಟ್ಟಿತು. ಯಾರೊಬ್ಬರಿಗೂ ಅದಕ್ಕೆ ಪ್ರತಿಯಾಗಿ ಏನನ್ನೂ ಹೇಳಲು ಹೊಳೆಯಲಿಲ್ಲ. ಈ ಅಮೂಲ್ಯ ಸೂಚನೆಗಾಗಿ ಆ ಸದಸ್ಯ ಮಹಾಶಯರಿಗೆ ಕೃತಜ್ಞತೆ ವ್ಯಕ್ತಪಡಿಸುವ ಗೊತ್ತುವಳಿ ಮಂಡಿಸಲ್ಪಟ್ಟಾಗ ಮಾತ್ರ ಅನೇಕ ನಿಃಸ್ಪೃಹಧ್ವನಿಗಳು ಕೇಳಬಂದವು.

"ಕೌನ್ಸಿಲ್ಲಿನ ಸದಸ್ಯರೇ ಆಗಿರುವವರಿಗೆ ಕೌನ್ಸಿಲು ಕೃತಜ್ಞತೆ ಅರ್ಪಿಸುವುದೆಂದರೆ ಒಬ್ಬ ವ್ಯಕ್ತಿ ತನ್ನನ್ನೇ ತಾನು ಅಭಿನಂದಿಸಿದಂತೆ. ಇದು ಎಂಥ ಅರ್ಥಹೀನ ಸಂಗತಿಯೆಂದರೆ ತತ್‌ಕ್ಷಣ ಇಂಥ ಸೂಚನೆಯನ್ನು ಕಿತ್ತು ಹಾಕುವುದು ಯೋಗ್ಯ." ವಿರೋಧಿಗಳ ಈ ಆಕ್ಷೇಪ ಗಮನಿಸಿ ಸೂಚನೆಯನ್ನು ಕಿತ್ತು ಹಾಕಿಯೂ ಆಯಿತು. ಆದರೂ ಗೊತ್ತುವಳಿಯನ್ನು ನಡೆವಳಿ ಪುಸ್ತಕದಲ್ಲಿ ದಾಖಲಿಸಿ ಅದನ್ನು ತಿರಸ್ಕರಿಸಿದ ಕಾರಣವನ್ನೂ ನಮೂದಿಸಬೇಕೆಂದಾಯಿತು.

ಅಷ್ಟಾದ ಮೇಲೆ ತೆರಿಗೆಯ ಸೂಚನೆಯನ್ನು ಚರ್ಚೆಗೆ ಎತ್ತಿಕೊಳ್ಳಲಾಯಿತು. ರಾಜ್ಯದಲ್ಲಿ ಒಟ್ಟು ಎಷ್ಟು ವಾಕಿಂಗ್ ಸ್ಟಿಕ್ಕುಗಳು ಇರಬಹುದೆಂಬುದನ್ನು ಅಂದಾಜು ಮಾಡುವುದಕ್ಕಾಗಿ ಅಂಕೆಸಂಖ್ಯೆ ಶಾಸ್ತ್ರಜ್ಞರ ಒಂದು ಕಮಿಟಿ ನೇಮಿಸಬೇಕೆಂದು ತೀರ್ಮಾನಿಸಲಾಯಿತು. ಸಂಗಡವೇ ವಾಕಿಂಗ್ ಸ್ಟಿಕ್ಕುಗಳಿಗೆ ಯಾವ ತಳಹದಿಯ ಮೇಲೆ ತೆರಿಗೆ ಲೆಕ್ಕ ಮಾಡಬೇಕೆಂದು ಸೂಚಿಸಲು ಅರ್ಥಶಾಸ್ತ್ರಿಗಳ ಒಂದು ಸಮಿತಿ ಕೂಡ ನೇಮಿಸಲ್ಪಡಬೇಕೆಂದು ನಿರ್ಣಯವಾಯಿತು. ಇನ್ನೊಂದು ಸಮಿತಿಯನ್ನು ನೇಮಿಸಿ ಕುಂಟರು ಉಪಯೋಗಿಸುವ ಬಗಲುಗೋಲು(ಕ್ರಚಸ್)ಗಳನ್ನು ವಾಕಿಂಗ್ ಸ್ಟಿಕ್ಕುಗಳೆಂದು ಗಣಿಸಬೇಕೇ ಮತ್ತು ಹಾಗೆ ಪರಿಗಣಿಸಿದಲ್ಲಿ ಅವುಗಳನ್ನು ಒಂದು ಸ್ಟಿಕ್ಕೆಂದು ಗಣಿಸಬೇಕೇ ಅಥವಾ ಎರಡೆಂದೇ ಅಥವಾ ಕೃತಕ ಹಲ್ಲು ಇಲ್ಲವೆ ಕನ್ನಡಕಗಳಂತೆ ಒಂದೇ ಘಟಕವೆಂದು ಬಗೆಯಬೇಕೇ ಅಥವಾ ಕೃತಕ ಹಲ್ಲುಗಳಂತೆ ತೂಕದ ಮೇಲೆ ತೆರಿಗೆ ಹೇರಬೇಕೇ ಎಂದು ಸಲಹೆ ಕೊಡುವ ಜವಾಬ್ದಾರಿಯನ್ನು ಆ ಸಮಿತಿಗೆ ಒಪ್ಪಿಸಲಾಯಿತು. ಈ ಕ್ರಚ್ ಕಮಿಟಿಗೆ ಒಂದು ಉಪಸಮಿತಿಯನ್ನು ನೇಮಿಸಿ, ಶಿಕ್ಷಕರು ಉಪಯೋಗಿಸುವ ಬೆತ್ತವನ್ನು ಕೆಲಸದ ಉಪಕರಣವೆಂದು ಬಗೆಯಬೇಕೇ ಅಥವಾ ಭೋಗ ಸಾಮಗ್ರಿ ಎಂದೆಣಿಸಬೇಕೇ ಎಂದು ವಿಚಾರಿಸಿ ನಿರ್ಣಯಿಸಲು ಅದಕ್ಕೆ ಕೇಳಿಕೊಂಡದ್ದಾಯಿತು. ಯಾಕೆಂದರೆ ಕೆಲ ಉಪಾಧ್ಯಾಯರು ತಮ್ಮ ಛಾತ್ರರನ್ನು ಬೆತ್ತದಿಂದ ಹೊಡೆಯುವ ಬದಲು ಬರೇ ಅಂಗೈಯಿಂದಲೇ ಥಳಿಸುತ್ತಾರೆಂಬುದು ಗಮನಕ್ಕೆ ಬಂದಿದೆ. ಇನ್ನು ಕೆಲವರು ತಮ್ಮ ಪಾದಗಳಿಂದಲೇ ವಿದ್ಯಾರ್ಥಿಗಳನ್ನು ಒದೆಯುವುದುಂಟು.

ಈ ಸಮಿತಿಗಳು ಲಗುಬಗೆಯಿಂದ ತಮ್ಮ ಕಾರ್ಯ ಪೂರೈಸಿ ನಿಯಾಮಕ ಸಮಿತಿಗೆ ವರದಿ ಸಲ್ಲಿಸಿದವು. ಆ ಸಮಿತಿ ಹಣಕಾಸಿನ ಸಮಿತಿಗೆ ತನ್ನ ತೀರ್ಮಾನಗಳನ್ನು ಸಾದರ ಪಡಿಸಿತು. ಆ ಸಮಿತಿ ತನ್ನ ತೀರ್ಮಾನಗಳನ್ನು ಮಾರ್ಗೋಪಾಯ ಸಮಿತಿಗೆ ಒಪ್ಪಿಸಿತು. ಆ ಸಮಿತಿಯಾದರೋ ಅವುಗಳನ್ನು ಜಾರಿಗೊಳಿಸುವ ಮಾರ್ಗೋಪಾಯಗಳನ್ನು ಕಂಡುಹಿಡಿಯಿತು. ಹಾಗಾದೊಡನೆ ಸರಕಾರವು ತನ್ನ ಶಾಸನಬದ್ಧ ಅಧಿಕಾರಗಳನ್ನು ಚಲಾಯಿಸಿ 'ವಾಕಿಂಗ್‌ಸ್ಟಿಕ್ ತೆರಿಗೆ ಕಾನೂನ'ನ್ನು ಜಾರಿಗೊಳಿಸಿತು.

ಪ್ರಾರಂಭದಲ್ಲಿ ಈ ನೂತನ ತೆರಿಗೆಯನ್ನು ವಾಕಿಂಗ್ ಸ್ಟಿಕ್‌ರಹಿತರು ಮಾತ್ರವಲ್ಲ, ಸಹಿತರು ಕೂಡ ಮರು ಮಾತಿಲ್ಲದೆ ಒಪ್ಪಿಕೊಂಡರು. ಮಾತ್ರವಲ್ಲ, ಕೆಲ ವಾಕಿಂಗ್ ಸ್ಟಿಕ್‌ಧಾರಿಗಳು ತಮ್ಮ ಊರುಗೋಲೊಡೆತನದ ಬಗ್ಗೆ ಜಂಭಪಟ್ಟುಕೊಂಡರು. ತಮಗೆ ಈ ಕೋಲುಗಳ ಅಗತ್ಯವಿಲ್ಲವಾದರೂ ಸಾರ್ವಜನಿಕ ಬೊಕ್ಕಸಕ್ಕೆ ಕೈಯಾಸರೆಯಾಗಬೇಕೆಂಬ ಕರ್ತವ್ಯಬುದ್ಧಿಯಿಂದ ತಾವು ಕೋಲು ಹಿಡಿಯುತ್ತಿರುವುದಕ್ಕಾಗಿ ಅವರ ಹೆಗ್ಗಳಿಕೆಯಾಗಿತ್ತು.

ಆದರೆ ಕಾಲ ಕಳೆದಂತೆ ವಾಕಿಂಗ್ ಸ್ಟಿಕ್ಕುಗಳು ಅಪರೂಪವಾಗತೊಡಗಿದವು. ಕೊನೆಗೊಮ್ಮೆ ಅವು ಪೂರ್ತಿ ಅದೃಶ್ಯವಾದವು. ಅವಿಲ್ಲದೆ ಓಡಾಡಲೇ ಆರದ ಅಂಗಹೀನರೂ, ಮುದುಕರೂ ಏನು ಮಾಡಿದರೆನ್ನುತ್ತೀರಾ? ಅವರು ತೆರಿಗೆ ತಪ್ಪಿಸುವುದಕ್ಕಾಗಿ ಊರುಗೋಲುಗಳ ಬದಲಾಗಿ ಕೊಡೆಗಳನ್ನು ಉಪಯೋಗಿಸತೊಡಗಿದರು. ತನಗೆ ಬರುವ ಆದಾಯ ಖೋತಾ ಆದದ್ದನ್ನು ಕಂಡು ಸರಕಾರ ಒಂದು ಹೊಸ ಕಾನೂನೂ ಜಾರಿಪಡಿಸಿತು. ವಾಕಿಂಗ್ ಸ್ಟಿಕ್ಕುಗಳನ್ನು ಉಪಯೋಗಿಸಿದರೂ ಉಪಯೋಗಿಸದಿದ್ದರೂ ಅವುಗಳನ್ನು ಇಟ್ಟುಕೊಂಡ ಮಾತ್ರಕ್ಕೆ ಮಾಲೀಕರ ಮೇಲೆ ತೆರಿಗೆ ಬಿದ್ದೇ ಬೀಳುವುದೆಂದು ಅದರ ಆಶಯವಾಗಿತ್ತು. ಈ ನಡುವೆ ಕೆಲ ನಾಗರಿಕರು ತಮ್ಮ ಧರ್ಮದ ಪ್ರಕಾರ ವಾರದಲ್ಲಿ ಒಂದು ದಿವಸ ಊರುಗೋಲು ಹಿಡಿಯುವುದಕ್ಕೆ ನಿಷೇಧವಿರುವುದರಿಂದ ತಮಗೆ ತೆರಿಗೆಯ 6/7 ಅಂಶವನ್ನು ಮಾತ್ರ ಆಕರಿಸಬೇಕೆಂದು ಮನವಿ ಮಾಡಿದರು. ಈ ಮನವಿ ತಿರಸ್ಕೃತವಾಯಿತು. ಸಬ್ಬತ್ ದಿನದಲ್ಲಿ ಯಾರಾದರೂ ವಾಕಿಂಗ್ ಸ್ಟಿಕ್

ಹಿಡಿಯುವುದು ಬಿಡುವುದು ಸರಕಾರಕ್ಕೆ ಸಂಬಂಧಿಸಿದ್ದಲ್ಲ ಎಂದು ಸರಕಾರ ಪಟ್ಟುಹಿಡಿಯಿತು. ಅಷ್ಟಲ್ಲದೆ, ಸರಕಾರ ಊರುಗೋಲು ಇನ್‌ಸ್ಪೆಕ್ಟರರ ಒಂದು ಪಡೆಯನ್ನೂ ತೆರಿಗೆ ವಸೂಲಿಗಾರರ ಇನ್ನೊಂದು ಪಡೆಯನ್ನೂ ನೇಮಿಸಿಕೊಂಡಿತು.

ರಾಜ್ಯದಾಖಲೆ ಪುಸ್ತಕದಲ್ಲಿ ಲಿಪ್ಪರಿ ರಾಜ್ಯದ ಸರಕಾರಿ ಮುಂದಾಳುಗಳಿಗೆ ಯುಕ್ತ ಪ್ರಶಂಸೆ ದಾಖಲಾಗಿತ್ತೆಂಬುದನ್ನು ಉಲ್ಲೇಖಿಸಲೇಬೇಕು. ಈ ಮುಂದಾಳುಗಳು ತಮ್ಮ ಮೇಲೆ ಬೀಳಬಹುದಾದ ತೆರಿಗೆಗಳನ್ನು ಮಾತ್ರ ಸಹಿಸುವುದಿಲ್ಲವೆಂಬ ಗೊಣಗಾಟ ಪ್ರಜೆಗಳಲ್ಲಿ ಇತ್ತು. ಆದರೆ ಈಯೊಂದು ಪ್ರಸಂಗದಲ್ಲಿ ವಸ್ತುಸ್ಥಿತಿ ಹಾಗಿದ್ದಿಲ್ಲವೆಂಬುದು ಸುವ್ಯಕ್ತವಾಗಿತ್ತು. ವಾಕಿಂಗ್ ಸ್ಟಿಕ್ ತೆರಿಗೆ ತಮ್ಮ ಮೇಲೂ ಬೀಳುತ್ತದೆಂದು ತಿಳಿದೂ ಈ ತೆರಿಗೆ ಮಸೂದೆಯನ್ನವರು ಪಾಸು ಮಾಡಿದ್ದರಲ್ಲವೆ? ಅಷ್ಟೇ ಅಲ್ಲ, ಅಗತ್ಯವಿರಲಿ ಬಿಡಲಿ, ಪ್ರತಿಯೊಬ್ಬನೂ ವಾಕಿಂಗ್ ಸ್ಟಿಕ್ ಖರೀದಿಸಲೇಬೇಕೆಂದು ಅವರು ಶಾಸನ ಮಾಡಿದ್ದರು. ವಾಕಿಂಗ್ ಸ್ಟಿಕ್ ಉಳ್ಳವರೆಲ್ಲ ಅವುಗಳನ್ನು ಹಿಡಿದುಕೊಂಡೇ ನಡೆಯಲಾರಂಭಿಸಿದರು. ಹೀಗಾಗಿ ಅವುಗಳಿಗೆ ಅಭೂತಪೂರ್ವ ಬೇಡಿಕೆ ಉಂಟಾದ್ದರಿಂದ ವ್ಯಾಪಾರಿಗಳು ಅವುಗಳ ಬೆಲೆಯೇರಿಸಿದರು. ಕೊಂಡವರು ಕೊಂಡರು. ಬಿಟ್ಟವರು ಬಿಟ್ಟರು. ವಾಕಿಂಗ್ ಸ್ಟಿಕ್ಕುಗಳ ಮಾರಾಟ ಇಳಿಮುಖವಾಯಿತು.

ಸರಕಾರಕ್ಕೆ ಇದೊಂದು ತಲೆನೋವಾಯಿತು. ಅವರು ವಾಕಿಂಗ್ ಸ್ಟಿಕ್ಕುಗಳ ಬೆಲೆಯನ್ನು ನಿಯಂತ್ರಿಸಲು ಒಂದು ತಜ್ಞ ಸಮಿತಿ ನೇಮಿಸಿದರು. ಆ ಸಮಿತಿ ತನ್ನ ಕೆಲಸವನ್ನು ಸಮರ್ಪಕವಾಗಿ ಮಾಡಿತಲ್ಲದೆ, ನಿಗದಿತ ಬೆಲೆಗಳಿಗಿಂತ ಹೆಚ್ಚಿಗೆಗೆ ಮಾರುವುದನ್ನು ಕ್ರಿಮಿನಲ್ ಅಪರಾಧವೆಂದು ಸಾರುವ ತಿದ್ದುಪಡಿಯನ್ನು ಪಾಸುಮಾಡಿತು. ವ್ಯಾಪಾರಿಗಳು ಏನುಪಾಯ ಮಾಡಿದರು? ಅವರು ವಾಕಿಂಗ್ ಸ್ಟಿಕ್ಕುಗಳನ್ನು ಅಂಗಡಿಗಳಿಂದ ಮಾಯ ಮಾಡಿ ಕಳ್ಳಪೇಟೆಯಲ್ಲಿ ಮಾರತೊಡಗಿದರು. ಸರಕಾರ ಬಿಟ್ಟೀತೆ? ಊರುಗೋಲುಗಳನ್ನು ಪರದೇಶಗಳಿಂದ ಆಮದು ಮಾಡುವುದಾಗಿ ಘೋಷಿಸಿತು. ವ್ಯಾಪಾರಿಗಳು ಗಾಬರಿಬಿದ್ದರು. ಊರುಗೋಲುಗಳೆಲ್ಲ ಕತ್ತಲೆಯಿಂದ ಮಾರಾಟದ ಶೆಲ್ಫುಗಳಿಗೆ ವಾಪಸಾದವು. ಬೆಲೆಗಳು ಕುಸಿದವು. ಎಂಥ ಬಡವರೂ ಅದನ್ನು ಕೊಳ್ಳಬಹುದಾಯಿತು. ಆದರೆ

ಕೆಲವೇ ದಿನಗಳಲ್ಲಿ ವಾಕಿಂಗ್ ಸ್ಟಿಕ್ಕುಗಳೇ ಅಲಭ್ಯವಾದವು. ಈ ನಡುವೆ ಕೆಲವರು ಗೊಣಗತೊಡಗಿದರು. ತಮ್ಮ ಸ್ಟಿಕ್ಕುಗಳು ತುಂಬಾ ತೆಳ್ಳಗಿದ್ದರೂ ದಪ್ಪನ್ನವುಗಳ ಮೇಲೆ ಬೀಳುವಷ್ಟೇ ತೆರಿಗೆ ಬೀಳುವುದು ಅನ್ಯಾಯವೇ ಸೈ. ಅದೇ ವೇಳೆಗೆ ಗಿಡ್ಡ ಪ್ರಜೆಗಳು ತಮ್ಮ ಕುಳ್ಳ ದಂಡದ ಮೇಲೆ ಎತ್ತರ ಪ್ರಜೆಗಳ ಉದ್ದನ್ನ ಸ್ಟಿಕ್ಕುಗಳಿಗೆ ಬೀಳುವಷ್ಟೇ ತೆರಿಗೆ ಬೀಳುವುದು ಶುದ್ಧ ತಪ್ಪೆಂದೂ ಉದ್ದಕ್ಕೆ ಸರಿಯಾಗಿ ದಂಡಗಳ ಮೇಲೆ ತೆರಿಗೆ ಹೇರಬೇಕೆಂದೂ ವಾದಿಸತೊಡಗಿದರು.

ಒಂದಾದ ಮೇಲೊಂದು ದೂರು ಎದ್ದಿತು. ಕೆಲವೇ ಕಾಲದಲ್ಲಿ ಇಡೀ ರಾಜ್ಯ ಅಲ್ಲೋಲ ಕಲ್ಲೋಲವಾಯಿತು. ಲಿಪ್ಪರಿ ರಾಜ್ಯದ ಕೌನ್ಸಿಲ್ ಅಧಿವೇಶನವನ್ನು ಕರೆಯುವುದಾಯಿತು. ವಾಕಿಂಗ್ ಸ್ಟಿಕ್ಕುಗಳನ್ನೂ ಅದರ ಮೇಲಿನ ತೆರಿಗೆಯನ್ನೂ ಹೊಗಳಿಯೇ ಹೊಗಳಿದ್ದಾಯಿತು. ಈ ಭಾಷಣಗಳ ಪೂರ್ತಿ ಪಾಠಗಳು ಪತ್ರಿಕೆಗಳಲ್ಲಿ ಈಗಾಗಲೇ ವರದಿಯಾಗಿರುವುದರಿಂದ ಇಲ್ಲಿ ಅವುಗಳನ್ನು ಪುನರುಚ್ಚರಿಸುವ ಅಗತ್ಯವಿಲ್ಲ. ಆದರೆ ಕೌನ್ಸಿಲ್ಲಿನ ಒಂದು ನಿರ್ಣಯವನ್ನು ಇಲ್ಲಿ ಉಲ್ಲೇಖಿಸಲೇಬೇಕು. ಅದೆಂದರೆ ಕಟ್ಟಿಗೆ ಖರೀದಿಗಾಗಿ ಒಂದು ಪ್ರತಿನಿಧಿ ಮಂಡಲವನ್ನು ವಿದೇಶಕ್ಕೆ ಕಳಿಸಬೇಕೆಂಬುದು. ವಾಕಿಂಗ್ ಸ್ಟಿಕ್ಕುಗಳಿಗಾಗಿ ಅದು ಬೇಕಾಗಿತ್ತು. ದೇಶದಲ್ಲಿ ಅವಶ್ಯವಿದ್ದಷ್ಟು ಮರಗಳು ಇರಲಿಲ್ಲ. ಅದು ಯಾಕೆಂದರೆ ಮರಗಳನ್ನು ನೆಟ್ಟಂತೆ ತಮ್ಮ ಅರ್ಬರ್ ದಿನಾಚರಣೆಗಾಗಿ ಮಕ್ಕಳು ಅವುಗಳನ್ನು ಕದ್ದುಬಿಡುತ್ತಿದ್ದರು. ಕಟ್ಟಿಗೆ ಖರೀದಿಗೆ ಹಣವೊದಗಿಸಲು ಅಂತಾರಾಷ್ಟ್ರೀಯ ಸಾಲಕ್ಕಾಗಿ ಮಾತುಕತೆ ನಡೆಸಲು ಒಂದು ಸಮಿತಿ ನೇಮಕ ಹೊಂದಿತು. ಇನ್ನೊಂದು ಸಮಿತಿಯನ್ನು ನೇಮಿಸಿ ಕಟ್ಟಿಗೆಯನ್ನು ಎಲ್ಲಿ ಕೊಳ್ಳಬೇಕೆಂದು ನಿರ್ಧರಿಸುವ ಕೆಲಸ ಅದಕ್ಕೆ ವಹಿಸಲ್ಪಟ್ಟಿತು.

❑



ಚಿಕ್ಕಂದಿನಲ್ಲಿ ಶಾಲೆಗೆ ಹೋಗುತ್ತಿದ್ದಾಗಿನ
ಈಗ ನನ್ನ ಬುದ್ಧಿ ಬೆಳೆದಿದೆ. ಅನುಭವ
ಬೆಳೆದಿದೆ. ಕೆಲಸ ಮಾಡಲಾರದವ ಉಪಾ
ಬೀಳಬೇಕೆಂಬ ತತ್ವ ನನಗೂ ಮಂದಟ್ಟಾಗ
ಏನು ಮಾಡಲಿ ಹೇಳು? ಶತಪ್ರಯತ್ನ ಮ
ಸಹನೆಯನ್ನು ಅಭ್ಯಾಸ ಮಾಡಿದ್ದೇನೆ.

ನಾವು ಚಿಕ್ಕವರಿರುವಾಗ ನನ್ನ ಅ
ಹೇಳುತ್ತಿದ್ದದ್ದು ನನಗೆ ನೆನಪಿ
"ಯಾವಾಗಲೂ ಕೆಟ್ಟ ಮಾತು ಆಡಬಾರ
ಅಸ್ತು ದೇವತೆ, ಆಗಾಗ್ಗೆ ಅಸ್ತು ಅ
ಅನ್ನುತ್ತದೆ. ಕೆಟ್ಟದ್ದು ಹೇಳಿದರೆ ಅದಕ್ಕೇ ಅ
ಅಂದು ಬಿಡುವುದೂ ಉಂಟು" ಎಂತ.
ನಾನೂ ಅಜ್ಜಿಗೆ ಬುದ್ಧಿಯಿಲ್ಲವೆ
ಎಣಿಸಿಕೊಂಡಿದ್ದೆ. ಅವರಿಗೆ ಹೆ
ಬುದ್ಧಿಯಿತ್ತು ಎಂತ ನಾನು ಈ ಹೊತ
ಹೇಳುವುದಿಲ್ಲ. ಆದರೂ ಅವರು ಹೇಳುತ್ತಿ
ಕಟ್ಟುಕತೆಯಲ್ಲಿ ಸ್ವಲ್ಪ ಹುರುಳಿತ್ತೆಂ
ಆಮೇಲೆ ನನ್ನ ಅನುಭವವಾಯಿತು.

ಲಾಂಗೂಲಾಚಾಯ